# ಅಬ್ಬಿಯ ಮಡಿಲು

★

ಲೇಖಕರು:

ಟಿ. ಜಿ. ಮುಡೂರು

ಕೆ. ಎಸ್. ಶರ್ಮ

1957

...ಗಮ ಸಾಹಿತ್ಯಮಾಲೆ

ಕಲ್ಮಡ್ಕ.

# ಅಬ್ಬಿಯ ಮಡಿಲು

★

ಲೇಖಕರು:

ಟಿ. ಜಿ. ಮುಡೂರು

ಕೆ. ಎಸ್. ಶರ್ಮ

1957

ಸಂಗಮ ಸಾಹಿತ್ಯಮಾಲೆ

ಕಲ್ಮಡ್ಕ.

ಬೆಲೆ: ರೂಪ್ಯಾ 0·70

ಬಂಜೆತಾಯಿ — ಟಿ. ಜಿ. ಮುಡೂರು.

ಬೇಡವಾದ ಊರು — ಕೆ. ಎಸ್. ಶರ್ಮ.



ಸಂಗಮದ ಈ ಮೊದಲ ಪ್ರಕಟನೆಗಳು

ಬೆಳ್ಳಿಯ ಸೆರಗು (ಕಾದಂಬರಿ) ಎ. ಗೋಪಾಲಕೃಷ್ಣ.

ಚಿಕಿತ್ಸೆಯ ಹುಚ್ಚು (ಕತಾಸಂಕಲನ) ಯರ್ಮುಂಜ ರಾಮಚಂದ್ರ.

## ಅರ್ಪಣೆ

ಸಂಗಮಕ್ಕಾಗಿ
ನಮ್ಮೊಡನೆ ಶ್ರಮಿಸಿ
ಅಕಾಲದಲ್ಲಿ ನಮ್ಮನ್ನಗಲಿದ
ಸಾಹಿತ್ಯ ಸಹೃದಯಿ
ದಿ। ಕು. ರಾಮಚಂದ್ರರಿಗೆ

# ಪ್ರಕಾಶಕರ ಮಾತು

ಸಂಗಮದ ಸಾಹಿತ್ಯಕ್ಕಾಗಿ ಕಾದು ಕುಳಿತಿರುವ ಓದುಗರಿಗೆ ಮಾಲೆಯು ಈ ಬಿಡಿ ಹೂವನ್ನೀಗ ಕೊಡಲು ಬಯಸಿದೆ. ಈ ಎರಡು ನೀಳ್ಗತೆಗಳಲ್ಲಿ ಬರುವ ಮಲೆನಾಡಿನ ನಿಸರ್ಗ ಚಿತ್ರಣವೇ 'ಅಬ್ಬಿಯ ಮಡಿಲು.' ಲೇಖಕರೂ ಮಲೆನಾಡಿನ ನಮ್ಮವರೇ ಆದುದರಿಂದ ಮಲೆನಾಡಿನ ಓದುಗರಿಂದ ಇದಕ್ಕೆ ಪ್ರೋತ್ಸಾಹ ಸಿಗಬಹುದು. ಉಳಿದ ಕನ್ನಾಡಿನ ಜನತೆಗೆ ಈ ಚಿತ್ರಣವು ಪ್ರಿಯವಾಗಬಹುದೆಂದೂ ಭರವಸೆಯಿದೆ.

ಅಬ್ಬಿಯ ಮಡಿಲು ಪ್ರಾಕೃತಿಕ ಕಲಾಕೇಂದ್ರ ಇಲ್ಲಿ ನವನಾಗರಿಕತೆಯ ಮೋಡಿಯಿಲ್ಲ. ವಿಕೃತ ವೇಷಭೂಷಣಗಳ ಕೃತಕ ಅಲಂಕಾರವಿಲ್ಲ. ಮನೋ ವಿಕಾರಗೊಳಿಸುವ ಅಶ್ಲೀಲ ಪ್ರಣಯ ಚೇಷ್ಟೆಗಳಿಲ್ಲ. ಕತೆಗಳೆರಡೂ ಈ ರೀತಿಯ ಶುಚಿಯನ್ನು ಕಾಯ್ದುಕೊಂಡಿರುವುದರಿಂದ ಸರ್ವರಿಗೂ ಇದು ರುಚಿ ಯಾಗುವಂತೆ ವಿದ್ಯಾಲಯಗಳಲ್ಲಿ ಉಪಪಠ್ಯವಾಗಿಡಲೂ ಯೋಗ್ಯವೆಂದು ನಂಬಿಕೆ. ಆದಕ್ಕಾಗಿ ನಾವು ಯತ್ನಿಸಿರುವೆವು'

ನಮ್ಮ ಮೊದಲಿನ ಪ್ರಕಟಣೆಗಳಿಗೆ ಸಿಕ್ಕಿರುವ ಓದುಗರ ಬೆಂಬಲವು ಇದಕ್ಕೂ ದೊರೆಯಬಹುದೆಂದು ನಂಬಿ ಲೇಖಕರ ಮುದ್ರಕರ ಹಾಗೂ ಸಲಹೆ ಗಾರರ ಉಪಕಾರ ಸ್ಮರಿಸುವೆವು.

ಸಂಗಮ ಕಲಾ ಸಂಘ
ಕಲ್ಲಡ್ಕ.

ಪಿ. ಜಿ. ಭಟ್,
ಕಾರ್ಯದರ್ಶಿ.

# ಬಂಜೆತಾಯಿ



ಅಬ್ಬಿಯ ಮಡಿಲು ...

ಧೋ....ಎಂದು ಮೊರೆಯುವ ತೊರೆಯ-ಮಲೆನಾಡ ಅಬ್ಬಿಯ ಮಡಿಲಲ್ಲಿ ಮೈಚಾಚಿ ಅದರ ನಿಡುದನಿಯ ಜೋಗುಳಕ್ಕೆ ಮಲಗಿದ ಅಬ್ಬೆ ಮಡಿಲಿನ ಹಸುಳೆ ಈಯೂರು. ಬೆಟ್ಟದಲ್ಲಿ ಹುಟ್ಟಿ, ಪಡುಗಟ್ಟಗಳ ಇಳಿಜಾರು ಸೆರಗಿನಲ್ಲಿ ಮಿಂಚಿನಂತೆ ಓಡಿ, ವನತಪ್ಪಲಲ್ಲಿ ಹರಿದು, ಝರಿಪ್ರಪಾತಗಳಲ್ಲಿ ಹಾರಿ, ಜಾರು ಬಂಡೆಗಳಲ್ಲಿ ಜಾರಿ, ಕೋಡುಗಲ್ಲುಗಳನ್ನೇರಿ ನರ್ತಿಸುವ ನಾಟ್ಯರಾಣಿ-ಉದ ಯಾಸ್ತಗಳ ಹೊಂಬೆಳಕಿಗೆ ಸಿಡಿವ ಸೀರ್ಪನಿಗಳ ಹಾರಾಟದಲ್ಲಿ ಮಿರುಗುವ ಬಣ್ಣದ ಪಾತರಗಿತ್ತಿ-ಬಂಡೆಗಳಿಗೆ ಧುಮುಕಿ ಬೆಳ್ನೊರೆಯಾಗಿ ಉಕ್ಕಿ ದನಿ ಮಾಡುವ ಹೂವಾಡಿಗಿತ್ತಿ-ಗಿರಿಸುತೆಯು ತಾನಿಲ್ಲಿ ನರ್ತಿಸುತ್ತಾ, ಹಾರಾ ಡುತ್ತಾ, ದನಿಮಾಡುತ್ತಾ ಮುಂದಾಗುವಳು.

ಮೈತುಂಬಿದ ತೊರೆ ಬನಗಳೆಡೆಯ ಈ ಪ್ರದೇಶದಲ್ಲಿ ಫರ್ಲಾಂಗಿನಷ್ಟು ಅಡ್ಡಕ್ಕೆ ಬೆಳೆದಿರುತ್ತಾಳೆ. ಮಳೆಗಾಲದಲ್ಲಿ ಅರ್ಧಮೈಲಿಗೂ ವಿಸ್ತರಿಸುವ ಉನ್ಮತ್ತ ವಿಕೃತಾಕೃತಿಯ ಈಕೆ ಊರಿಗೆ ಕೆಲವೊಮ್ಮೆ ಮಾರಿ-ಉಳಿದ ಸಮಯಗಳಲ್ಲಿ ಊರಿಗೆ ಮೊಲೆಯುಣಿಸುವ ಮಾತಾಯಿ—

ಸಂಜೆ ಮುಂಜಾನೆಗಳಲ್ಲಿ ಊರ ಮಕ್ಕಳು ಮಳಲ ದಿನ್ನೆಯಲ್ಲಿ ಆಟ ವಾಡಬೇಕು; ರಾತ್ರಿಕಾಲ ಊರ ರೈತರು ತಮ್ಮ ಹೊಲಗಳಿಗೆ ಏತದಿಂದ ನೀರು ಮೊಗೆಯಬೇಕು; ನಡುಮಧ್ಯಾಹ್ನದ ಹೊತ್ತಿಗೆ ಊರ ಹೆಂಗುಸರು ಬಟ್ಟೆಯ ಹೊರೆಯನ್ನು ಮಡಿಮಾಡಲು ಇಲ್ಲಿಗೆ ತರಬೇಕು; ಹೊತ್ತು ಅಡ್ಡಾಗುವ ಮೊದಲೇ ಗುಡ್ಡೆಯಿಂದ ಮೇದು ಮರಳುವ ದನಕರುಗಳು ಇಲ್ಲಿ ಹೊಟ್ಟೆತುಂಬಾ ನೀರು ಕುಡಿಯಬೇಕು.

ಇಷ್ಟೆಲ್ಲಕ್ಕೂ ಆಸರೆಯಾದ ಅಬ್ಬಿಯ ಮಡಿಲು-ಸಂಜೆ-ಮುಂಜಾನೆ-ಉರಿ ಬಿಸಿಲಿಗೆ-ಕೋಡುವ ನಡುರಾತ್ರಿಯ ಛಳಿಗೆ ಎಡೆಬಿಡದೆ ಬೊಬ್ಬಿಡುತ್ತಿದೆ. ಮೈಲುದ್ದಕ್ಕೂ ಕೇಳಿಸುತ್ತಿದೆ ಈ ಅಬ್ಬಿಯ ಮೊರೆತ- ಧೋ....ಎಂದು.

ಧೋ....

ಈ ರೌದ್ರ ಮೊರೆತ ದೂರಕ್ಕೆ ಸರಿದಂತೆ ಕಿವಿಗೆ ಸ್ವಲ್ಪ ಸ್ವಲ್ಪ ಮುಸುಕಾಗುತ್ತಾ ಹೋಗುವುದು. ಬಳಿಗೆ ಸರಿದಂತೆ ಅದರ ಅಟ್ಟಹಾಸದ ಅಬ್ಬರಕ್ಕೆ ಕಿವಿಯೇ ಕಿವುಡಾಗುವುದು-ಸ್ವರದಲ್ಲೂ ಸ್ಪಷ್ಟತೆ ಹೆಚ್ಚುವುದು. ಧಡ್-ಧಡಾಲ್.... ಛಟ್-ಛಟಾಲ್....

ನಾಲ್ಕಾರು ಆಳು ಎತ್ತರದಿಂದ ಕೆಳಗುರುಳುವ ಅಬ್ಬಿಯ ಸಣ್ಣ ಸೀಳುಗಳು ಬಂಡೆಗಳಿಗೆ ಚಾಟಿ ಪೆಟ್ಟನಂತೆ ಅಪ್ಪಳಿಸುತ್ತವೆ- ಛಟ್-ಛಟಾಲ್ ಛಟ್-ಛಟಾಲ್...ಬೀಳಲಾರದೆ ಬೀಳುವ ನೀರಿನ ಹಿರಿಯ ಹೊಸಲು ಕೆಳ ಧುಮುಕುವುದು-ಧಡ್-ಧಡಾಲ್....ಧಡ್-ಧಡಾಲ್....

ಧಡ್-ಧಡಾಲ್.... ಛಟ್-ಛಟಾಲ್.... ಛಟ್-ಛಟಾಲ್.... ಧಡ್-ಧಡಾಲ್....ತಕಪಕ ಸುಡುವ ಈ ಉರಿಬಿಸಿಲಿನಲ್ಲೂ ಮಲೆನಾಡ ಅಬ್ಬಿ ಮರಳಿ ದನಿಮಾಡುತ್ತಿದೆ. ಛಟ್-ಛಟಾಲ್....ಧಡ್-ಧಡಾಲ್....

ಈ ನಿಡುಬೊಬ್ಬೆಯಲ್ಲೂ ಅಬ್ಬಿಯ ಮಡಿಲಿನಲ್ಲಿ ಏಕಾಂತ ಮೌನವಿದೆ. ಸುಡುವ ಬಿಸಿಲಿನ ಬಿದಲು ತಂಪಿದೆ.

ಮನೆಗೆಲಸದಲ್ಲಿ ಬಿಡುವಿರದ ಊರ ತಾಯಂದಿರಿಗೆ ಬಟ್ಟೆ ಮಡಿಮಾಡುವ ನೆವದಿಂದಾದರೂ ಇಲ್ಲಿ ಬಿಡುವಿದೆ; ಗಂಡಂದಿರಿಗಂಜಿ ಬಾಳಬೇಕಾಗಿದ ಮಡದಿಯರಿಗೆ ಇಲ್ಲಿ ಮನಸಾ ವರ್ತಿಸುವರೆ ಸ್ವಾತಂತ್ರ್ಯವಿದೆ.

ಊರ ಹೆಂಗುಸರೆಲ್ಲಾ ಇಲ್ಲಿ ಒಮ್ಮೆಗೇ ಒಟ್ಟು ಸೇರಿ ತಮ್ಮೂರಿನ ವಿಶೇಷ ಸಮಾಚಾರಗಳನ್ನು ಸಂಗ್ರಹಿಸುತ್ತಾರೆ. ಅಲ್ಲಿಂದಲೇ ಎಲ್ಲಾ ಭಾಗಗಳಿಗೂ ಪ್ರಚಾರಮಾಡುತ್ತಾರೆ. ಆದಿಅಂತ್ಯವಿಲ್ಲದ ಸುದ್ದಿ ಸಮಾಚಾರಗಳಿಗೆ ರೆಕ್ಕೆ ಪುಕ್ಕಗಳು ಹುಟ್ಟುವುದು ಇಲ್ಲೆ; ಅತ್ತೆಯು ಸೊಸೆಯ ಮೇಲಿದ್ದ ಕೋಪವನ್ನು ಸೊಸೆಯು ಅತ್ತೆಯ ಮೇಲಿದ್ದ ಸಿಟ್ಟನ್ನೂ ತಾವು ಒಗೆಯ ತಂದಿರುವ ಬಟ್ಟೆಗಳನ್ನು ನೀರಲ್ಲದ್ದಿ ಹಾಸುಗಲ್ಲಿಗೆ 'ಛಟಾಲನೆ' ಬಡಿದು ಸೇಡು ತೀರಿಸಿಕೊಳ್ಳುತ್ತಾರೆ. ಇದರಿಂದ ಅಬ್ಬಿಯ ಪಕ್ಕದ ಹಾಸುಗಲ್ಲುಗಳು ಸವೆಸವೆದು ನುಣುಪಾಗಿವೆ.

ದಿನಕ್ಕೆ ಮೂರುಬಾರಿ ಸಮಯವನ್ನು ಸೂಚಿಸಿ ಧೂಳೆಬ್ಬಿಸುತ್ತಾ ಹಾದು ಹೋಗುವ ಅಬ್ಬಿಯಾಚೆದಂಡೆಗೊತ್ತಿದ ಮಾರ್ಗದ ಬಸ್ಸು ಇಲ್ಲಿಯವರಿಗೆ ಕೈಗಡಿಯಾರ. ಅಬ್ಬಿಯಲ್ಲಿರುವ ಹೆಂಗುಸರಂತೂ ತಮ್ಮ ಒಂದು ಕಿವಿ

ಕಣ್ಣುಗಳನ್ನು ಮಧ್ಯಾಹ್ನದ ಬಸ್ಸಿಗಾಗಿಯೇ ತಮ್ಮ ಕೆಲಸಗಳೆಡೆಯಲ್ಲಿ ಕಾದಿಟ್ಟಿರುತ್ತಾರೆ. ಬಸ್ಸಿನ ಹಾರ್ನ್ ಅಬ್ಬಿಯ ಗೋಷ್ಠಿಯನ್ನು ಅರ್ಧದಲ್ಲಿ ನಿಲ್ಲಿಸುತ್ತದೆ. ಮಧ್ಯಾಹ್ನದ ಊಟಕ್ಕೆ ಹಾಜರಾಗುವ ಗಂಡುಸರಿಗೂ ಅದೇ ಗಂಟೆ. ಬಸ್ಸು ಕೆಟ್ಟು ಹೋಗಿ ಹೊತ್ತು ಅಡ್ಡಾದರೂ ಬಸ್ಸನ್ನು ಕಾಣದ ಆವರಿಗೆ ಹಸಿವು ಗೊತ್ತಾಗುವುದಿಲ್ಲ.

ಈ ಅಭ್ಯಾಸದಿಂದ ಅಬ್ಬಿಯ ಹೆಂಗುಸರು ತಮ್ಮ ಕಾರ್ಯ ಮುಗಿಸಿಯೂ ಬಸ್ಸು ಮುಖಕಾಣಿಸದಿದ್ದರೆ ಕಾದುನಿಲ್ಲುತ್ತಾರೆ. ಊರ ಸುದ್ದಿಯನ್ನು ಆವರಿವರಿಂದ ತೆಗೆದು ಹೆಣೆಯುತ್ತಾರೆ. ಇಂಥವರಿಗೆ ಏನಾದರೊಂದು ಹೊಸ ಸುದ್ದಿಯ ತುಣುಕು ಸಿಕ್ಕಿಯೇಸಿಗುವುದು. ಎಷ್ಟು ದೊಡ್ಡ ಊರು! ದಿನಾ ಒಂದೆಡೆ ಗಾಳಿಬೀಸದಿರುತ್ತದೆಯೇ–? ಗಾಳಿ ತುಸು ಬೀಸಿದರೆ ಸಾಕು–ಎಲೆಗಳಲ್ಲಾಡುವುವು!

ಮಧ್ಯಾಹ್ನದ ಹೊತ್ತು ಊರ ಮಹಿಳಾಗೋಷ್ಠಿ ಅಬ್ಬಿಯ ಮಡಿಲಲ್ಲಿ ಸೇರಿತ್ತು. ಧಡ್-ಧಡಾಲ್....ಛಟ್-ಛಟಾಲ್....ಅಬ್ಬಿಯು ಒಂದೇ ಸವನೆ ಧ್ವನಿಸುತಿತ್ತು. ಕೈ ಬಳೆಗಳ 'ಗಿಜಿಲ್' ದನಿ ಇಲ್ಲಿ ಬಟ್ಟೆಯೊಗೆದು ಇನ್ನೂ ಆಗಿಲ್ಲವೆಂದು ಪಕ್ಕದವರಿಗೆ ಕರೆಕರೆದು ಹೇಳುತಿತ್ತು. ಇದರೆಡೆಯಲ್ಲಿ ಆವರಿವರ ದನಿಯೂ ಬೆರೆಯುತಿತ್ತು.

"ಯಾಕೊ....ಇಂದು ಚಂದ್ರಕ್ಕ ಬಂದಿಲ್ಲ"

"ಅವಳು ನಿನ್ನೆಯೂ ಬಂದಿಲ್ಲ ಕಮಲಾ"

"ಕೇಳಿದ್ರಾ....ವೆಂಕಮ್ಮ ಗುರಿಕಾರ್‍ರ ಮನೇ–ಮದುವೆ ಸುದ್ದಿ"

"ಏನಂದಿ ಕನಕೂ....ಮದುವೆ ಗುರಿಕಾರ್‍ರೆ ಮನೇಲಿ; ಯಾರಿಗಂತೆ.... ಯಾರ ಸುದ್ದಿ ಹೇಳ್ತಿ"

"ಮದುವೆ ಯಾವಾಗ ಕನಕಕ್ಕ"

"ದಿನ ನಿಶ್ಚಯವಾಗಿಲ್ಲ ಶೀಲೂ–ಗುರಿಕಾರ್‍ರೆ ಇದನ್ನು ಬೇಡಾಂತಾರಂತೆ "

"ಮತ್ಯಾರದಂತೀರಿ ಇಷ್ಟು ವತ್ತಾಯ ಎರಡನೆ ಮದುವೆಗೆ...."

"ಅಯ್ಯೋ....ಆ ಕಾವೇರಮ್ಮನಿಗೆ ಯಾಕೆ ಈ ಬುದ್ಧಿ ಅಂದ್ರೆ-ಒಳ್ಳೆ ತಾಯಿಯವ್ರು"

"ಲಕ್ಷ್ಮೀದೇವಿಯಂತ ಸೊಸೆ–ಆವಳ ಮೇಲೆ ಮತ್ತೆ ಮದುವೆ! ಇದು ಚಂದ್ರೂ ಹುಟ್ಟಿ ಬಂದಾಗ ಪಡೆದು ಬಂದ ಭಾಗ್ಯ...."

"ನೋಡೋದಕ್ಕೆ ಬೊಂಬೆಯಾಗಿದ್ರಾಯ್ತೆ ವೆಂಕಜ್ಜಿ; ಇದರೊಳಗೆ, ಒಂದೆರಡಾದ್ರೂ ಹೆರಬೇಡ್ವೆ"

"ಮಕ್ಕಾಗೋದು ನಮ್ಮ ಕೈಲಿರೋಲ್ಲ ಗೌರೂ......ಚಂದ್ರೂವಿಗೇನು ಪ್ರಾಯಕಳೀಲಿಲ್ಲ"

"ಸೊಸೆ ಹಡೆಯೋಲ್ಲಂತ ಒಂದು ನೆವ-ಕನಕತ್ತೆ--ಮಗನನ್ನು ಮರಳಿ ಮದುವೆಗೆ ಹಿಂಡುತ್ತಿರೊ ಆ ಕಾವೇರುಗೆ ಯಾರು ಆಗಬಹುದಂತೆ? ಅವ್ಳೇನು ಸಾಧಾರಣದ ಮೂರ್ತೀಂತ ತಿಳೀಬ್ಯಾಡಿ ಮಹಾ ಭದ್ರಕಾಳಿ..."

"ತಡೀರಕ್ಕ ಹೊಸ ಸೊಸೆ ಬರ್ತ್ತಾಳೆ ಬುದ್ಧಿ ಕಲಿಸೋಕೆ...."

ವಿಷಯವಿನ್ನೂ ವಿಸ್ತರಿಸುವುದರಲ್ಲಿತ್ತು. ಆದರೆ...ಹನ್ನೆರಡು ಗಂಟೆಯ ಬಸ್ಸು ಅಬ್ಬಿಯಾಚೆಕಡೆಯಲ್ಲಿ ಹಾರ್ನ್ ಹೊಡೆದು ಧೂಳೆಬ್ಬಿಸುತ್ತಾ ಅರೆ ಕ್ಷಣದಲ್ಲಿ ಮಾಯವಾಯಿತು. ಹೆಂಗುಸರ ಕೈಬಳೆಗಳು ತಮ್ಮವರ ಬಾಯಿಗೆ ಬೀಗಹಾಕಿ ಒಮ್ಮೆಯೇ ಚುರುಕಾದುವು. ಅವುಗಳ ಸದ್ದೂ ಕಡೆಕಡೆಗೆ ಕಡಿಮೆಯಾಗಿ ಅದೂ ಇಲ್ಲವಾಯಿತು.

ಯಾರಿದ್ದರೂ ಹೆಚ್ಚಲ್ಲ–ಇಲ್ಲದಿದ್ದರೂ ಕಡಿಮೆಯಿಲ್ಲ–ಒಂದೇ ರೀತಿ–ಒಂದೇ ದನಿ–ಅಬ್ಬಿಯು ಮೊರೆಯುತಿತ್ತು–ನೀರು ಕೆಳಗುರುಳಿ ಧುಮುಕುತಿತ್ತು.

ಧಡ್ ಧಡಾಲ್.... ಛಟ್ ಛಟಾಲ್...
ಛಟ್-ಛಟಾಲ್....ಧಡ್ ಧಡಾಲ್....ಧಡ್ ಧಡಾಲ್....ಛಟ್ ಛಟಾಲ್
ಧಡ್ ಧಡಾಲ್....ಛಟ್ ಛಟಾಲ್....ಧಡ್ ಧಡಾಲ್..

o o o o o

ಗುರಿಕಾರರ ಮನೆಯಲ್ಲಿ ಕಳೆದ ನಾಲ್ಕು ವರುಷಗಳ ಹಿಂದೆ ಬಹು ವಿಜೃಂಭಣೆಯಿಂದ ನಡೆದಿದ್ದ ಮದುವೆಯ ಸವಿನೆನಪು ಇನ್ನೂ ಊರಲ್ಲೆಲ್ಲಾ ಮರೆಯಾಗದಿರುವಾಗಲೇ ಅವರ ಎರಡನೇ ಮದುವೆಯ ಸುದ್ದಿಯೊಂದು ಅಸ್ಪಷ್ಟವಾಗಿ ಅಲ್ಲಲ್ಲಿ ಹರಡುತಿತ್ತು. ಅಂತೆಯೇ ಇದರ ಸಮಸ್ಯೆ ಸಮರ್ಥನೆಗಳು

ಊರ ವಾರ್ತಾಗಾರರ ಹಲವು ಮುಖಗಳಿಂದ ಹಲವು ರೀತಿಗಳಿಂದ ಪ್ರತಿಧ್ವನಿಸುತಿತ್ತು

ಅಂಧಾನುಸರಣೆಯ ಊರ ಹಳಬರು "ಅದರಲ್ಲಿ ತಪ್ಪೇನು? ಗುರಿಕಾರ ಸಣ್ಣಯ್ಯನ ಬಾಳಿನಲ್ಲಿ ಮೊದಲ ಹೆಂಡತಿಯ ಮೇಲೆ ಮಗದೊಬ್ಬಳು ಕಾಲಿಟ್ಟರೆ ಅದರಿಂದೇನೂ ಕೆಡುಕಾಗದು. ಅದೇನು ಈ ಊರಿಗೆ ಹೊಸ ಸಂಪ್ರದಾಯವೇ?" ಎಂದರೆ ಮತ್ತೆ ಕೆಲವರು ಮತ್ತಷ್ಟು ಉತ್ಸಾಹದಿಂದ "ಗುರಿಕಾರರ ವರ್ಚಸ್ಸು ಇದರಿಂದ ಹೆಚ್ಚಬೇಕು. ಎರಡು ಮಡದಿಯರನ್ನಾಳದವನಿಗೇನು ಗುರಿಕಾರಿಕೆ ಬಂತು" ಎಂದು ತಮ್ಮ ಅಮೂಲ್ಯ ಅನುಭವಗಳನ್ನು ಹೊರಗೆಡವುತಿದ್ದರು.

ತುಸು ಸುಧಾರಿತ ಪ್ರವೃತ್ತಿಯ ಪ್ರಮುಖರ ಅಡ್ಡ ಅಭಿಪ್ರಾಯಗಳು ಇದಕ್ಕೆ ಇಲ್ಲದಿರಲಿಲ್ಲ. "ಇರುವ ಹೆಣ್ಣಿಗೇನಾಗಿದೆ? ಮದುವೆಯಾಗಿ ಇನ್ನೂ ನಾಲ್ಕೈದು ವರ್ಷ ಕಳೆದಿಲ್ಲ; ಇಷ್ಟರಲ್ಲೇ ಇನ್ನೊಂದು ಮದುವೆಯೇ? ಇದಕೆ. ಗುರಿಕಾರರು ಒಪ್ಪಿದರೇ....?" ಎಂದು ಆಶ್ಚರ್ಯಪಡುವವರೂ ಹಲವರಿದ್ದರು

ಹೀಗೆ ಊರವಾರ್ತೆಯು ಹಲವರಿಂದ ಹಲವು ಬಗೆಯಲ್ಲಿ ಮೊಗಪಡೆಯುತಿದ್ದರೂ ಊರ ಪುರೋಹಿತರೊಬ್ಬರು ತಾನು ನುಗ್ಗಿದ ಮನೆಯೊಳಗೆಲ್ಲಾ 'ರಾಜಾನೋ ಬಹುವಲ್ಲಭಾ' ಎಂಬ ಒಂದೇ ಬಗೆಯ ಬೀಜ ಮಂತ್ರವನ್ನು ಬಿತ್ತುತ್ತಾ ಬರುತಿದ್ದರು. ಗುರಿಕಾರರ ಎರಡನೆ ಸಂಬಂಧಕ್ಕೆ ಸಂಚು ಹೂಡುತಿದ್ದವರೂ ಅವರೇ ಮತ್ತೆ—ತನ್ನ ದೂರದ ಸಂಬಂಧಿ ಹುಡುಗಿಯೊಬ್ಬಳನ್ನು ಗುರಿಕಾರರ ಮನೆಗೆ ನುಗ್ಗಿಸಿ ಲಾಭ ಪಡೆಯಲು ಅವರು ಅಷ್ಟರಲ್ಲೇ ಹವಣಿಸುತಿದ್ದರು. ಮರಳಿ ಮದುವೆಯಾಗುವಂತೆ ಮಗನನ್ನು ಪ್ರೇರೇಪಿಸಲು ಅವರ ತಾಯಿಯ ಮೂಲಕ ಗುರಿಕಾರರನ್ನು ಒತ್ತಾಯಿಸುತಿದ್ದರು.

ಈ ವಿಷಯದಲ್ಲಿ ತನಗೆ ವಿರೋಧಿಮತಿಗಳಾದ ಇತರರನ್ನು ಬಾಯಿ ಮುಚ್ಚಿಸುವ ಚಪಲತೆಯೂ ಪುರೋಹಿತರಲ್ಲಿತ್ತು. ಏಕಪತ್ನೀವ್ರತಕ್ಕಿಂತಲೂ ದ್ವಿಪತ್ನೀವ್ರತವೇ ಮೇಲೆಂದು ಅವರ ಪ್ರತಿಪಾದನೆ. ಗಂಡಸೊಬ್ಬನಿಗೆ ಅವನ ಭಾಗ್ಯದ ಬೆರಳೆಣಿಕೆಯಂತೆ ಅವನ ಪರಲೋಕದ ಸುಖಸಂಪತ್ತಿನ ಮಹಡಿಗಳೆಣಿಕೆಯಂತೆ ಇಹದಲ್ಲಿ ಅವನ ಮಡದಿಯರ ಸಂಖ್ಯೆಯೇರುವುದಂತೆ. ಇದೀಗಲೇ

ಮೂರು ಹೆಂಡಿರ ಗಂಡ ಪುರೋಹಿತರು ಇಡೀ ಊರನ್ನೆ ಸ್ವರ್ಗಕ್ಕೆತ್ತಲು ಯತ್ನಿಸುತಿದ್ದರು.

ಪ್ರಕೃತ ಗುರಿಕಾರರಿಗೆ ಈ ಪಂಥ ಪೌರುಷಗಳೇನೂ ಬೇಕಾಗಿರಲಿಲ್ಲ. ತನ್ನ ಎರಡನೇ ಮದುವೆಯೊಂದು ಅವರಿಗೆ ನುಂಗಲಾರದ ಗುಟುಕಾಗಿತ್ತು. ಕೈದಾರೆಯ ಮಡದಿ ಮನೆಯಲ್ಲಿ ಅನುಕೂಲೆಯಾಗಿರುತ್ತಾ ಎರಡನೆಯವಳೊಬ್ಬಳನ್ನು ಕೈಹಿಡಿಯುವುದು ಅವರು ಕನಸಿನಲ್ಲಿಯೂ ನೆನಸಲಾರದ ವಿಷಯವಾಗಿತ್ತು. ಒಂದೆಡೆ ತಾಯಿಯ ಒತ್ತಾಯಕ್ಕೆ ಅವರು ಒಪ್ಪದಿರುವುದು ಅಸಾಧ್ಯವಾದರೆ ಇನ್ನೊಂದೆಡೆ ಕೈಹಿಡಿದ ಮಡದಿಗೆ ದ್ರೋಹಬಗೆಯಲು ಅವರು ಹಿಂಜರಿಯುತಿದ್ದರು. ತನ್ನದೇ ಆತ್ಮಕ್ಕೆ ವಿರೋಧ ಬಗೆಯಬೇಕಾಗಿದ್ದ ಈ ಸಮಸ್ಯೆಯೊಂದು ಅವರು ಸುಖವಾಗಿ ದಾಂಪತ್ಯವನ್ನು ನಡೆಸಿಕೊಂಡು ಬರಬೇಕಾಗಿದ್ದ ರಸನಿಮಿಷಗಳಲ್ಲಿ ಅನಿರೀಕ್ಷಿತವಾಗಿ ವಿಷದ ಮೊನೆಯಂತೆ ಅವರೆದೆಯನ್ನು ಕೊರೆಯುತಿತ್ತು.

ಗುರಿಕಾರರು ಅವರ ತಂದೆಗೆ ಒಬ್ಬನೇ ಮಗ. ಇವರ ತಂದೆ ದೊಡ್ಡ ಗುರಿಕಾರರು ಸುತ್ತಲಿನ ನಾಲ್ಕೂರುಗಳಿಗೆ ಸುಪ್ರಸಿದ್ಧ ವ್ಯಕ್ತಿ! ವಂಶಪಾರಂಪರ್ಯವಾಗಿ ಗುರಿಕಾರರ ಮನೆತನದ ಗೌರವ ಅವರ ಮನೆಗಿದೆ. ಇಂದು ಮಗನ ಆಡಳಿತೆಯಲ್ಲೂ ಆ ಕೀರ್ತಿಗೆ ಕುಂದು ಬಾರದಂತೆ ಅದು ಕಾಯ್ದುಕೊಂಡಿತ್ತು. ಮಗನಿಗೆ ಹಳ್ಳಿಯ ಪ್ರಾಥಮಿಕ ವಿದ್ಯಾಭ್ಯಾಸ ಮಾತ್ರವಲ್ಲದೆ ತುಸು ಹೈಸ್ಕೂಲು ಶಿಕ್ಷಣವನ್ನೂ ತಂದೆ ಕೊಡಿಸಿದ್ದರು. ಮುಂದೆಗೆ ಓದಿಸಲಿಲ್ಲ. ಮುಂದೆ ಓದಿ ಸರಕಾರಿ ಉದ್ಯೋಗದಲ್ಲಿ ಮಾಣಿ ಹೋಗಬೇಕಾದುದಿಲ್ಲ ಎಂದೇ ಅವರ ಮನಸ್ಸು. ಅಂತೆಯೇ ತಾನು ಜೀವಿಸಿರುವಾಗಲೇ ತಂದೆ ಮಗನಿಗೊಂದು ಮದುವೆಮಾಡಿಸಿ ತನ್ನ ಸಕಲ ಭಾರವನ್ನೂ ಮಗನ ಹೆಗಲಿಗೇರಿಸಿ ನಿಶ್ಚಿಂತತೆಯಿಂದ ಜೀವನ ಮುಗಿಸಿದ್ದರು.

ಗುರಿಕಾರರಿಗೆ ಮದುವೆಯಾದುದು ಸೋದರಿಕೆಯಿಂದ. ಸಂಪಾಜೆಯ ಶಾಸ್ತ್ರಿಗಳ ಏಕಮಾತ್ರ ಪುತ್ರಿ ಚಂದ್ರಮ್ಮ ತನ್ನ ಗುಣರೂಪಗಳಲ್ಲಿ ಗಂಡನಿಗೂ ಗುರಿಕಾರರ ಮನೆತನಕ್ಕೂ ಒಪ್ಪುವ ಹುಡುಗಿ. ಮದುವೆಯಾದ ಹೊಸದರಲ್ಲಿ ಊರವರು ಮಾದರಿಗಾಗಿ ತೆಗೆದುಕೊಳ್ಳಬಹುದಾದ ದಂಪತಿಗಳು. ಅವರು ಜತೆಯಾಗಿ ಊರ ಜಾತ್ರೆ ಆಯನ ಮದುವೆ ಮುಂಜಿಗಳಿಗೆ ಹೊರಟರೆಂದರೆ

"ಎಣೆ ಹಕ್ಕಿಗಳಂತೆ" ಎಂದುಕೊಂಡು ಊರಿಗೆ ಊರೇ ಅವರನ್ನು ಎವೆಯಿಕ್ಕದೆ ನೋಡುತಿತ್ತು.

ಕಾಲವು ಒಂದೇ ರೀತಿಯಲ್ಲಿ ಮನುಷ್ಯನ ಬಾಳಿನಲ್ಲಿ ಹೊಂದಿಕೊಂಡಿರುವುದಿಲ್ಲ. ಸುಖದುಃಖಗಳ ಸಂಮಿಶ್ರ ಫಲಪಾಕದಲ್ಲಿ ಜೀವನವು ಪರಿಪಕ್ವವಾಗಬೇಕೆಂಬ ಹೊಸ ಅನುಭವವೊಂದು ಮದುವೆಯಾದ ಮರುವರುಷವೇ ಗುರಿಕಾರರ ಮನೆಗೆ ಕಾಲಿಟ್ಟಿತು. ದೊಡ್ಡ ಗುರಿಕಾರರು ಕಾಲವಶರಾದರು. ಗುರಿಕಾರರೇ ಎಲ್ಲಾ ಭಾರವನ್ನೂ ಹೊರಬೇಕಾಯಿತು. ಅಂತೆ "ಸೊಸೆಯ ಪಾದಧೂಳಿಯು ಮಾವನ ಹೆಸರನ್ನಡಗಿಸಿತು" ಎಂಬ ಕೆಲಮಂದಿಯ ಬಾಯ ಅಪವಾದವನ್ನು ಚಂದ್ರಮ್ಮನೂ ಹೊರಬೇಕಾಯಿತು. ಗಂಡನು ಮೊದಲೇ ಅನಾರೋಗ್ಯದಿಂದಿದ್ದು ಮಗನ ವಿವಾಹಕಾಲದಲ್ಲಿ ಹೆಚ್ಚು ಶ್ರಮತೆಗೆದುಕೊಂಡುದರಿಂದ ವಿಶೇಷ ಕಾಯಿಲೆಬಿದ್ದು ತೀರಿಕೊಂಡರೆಂದು ಕಾವೇರಮ್ಮನಿಗೆ ಅರಿವಾಗದುದಲ್ಲವಾದರೂ—ತುಸು ಅಂಧಶ್ರದ್ಧೆಯ ಅತ್ತೆಗೆ ತನ್ನ ದೌರ್ಭಾಗ್ಯಕ್ಕೆ ಸೊಸೆಯೂ ಸ್ವಲ್ಪ ಪಾಲುಗಾರಳಿರುವಳೆಂಬ ಅನುಭವವಾಗುತ್ತಿತ್ತು. ಅದರೊಂದಿಗೇ ಸೊಸೆಯಲ್ಲಿರುವ ಮಮತೆ ದಿನದಿನಕ್ಕೆ ಕಡಿಮೆಯಾಗ ಹತ್ತಿತು.

ಚಂದ್ರಮ್ಮ ಮಾತ್ರ ಅತ್ತೆಯನ್ನು ತಾಯಿಯೆಂದೇ ಬಗೆದು ಭಕ್ತಿಯಿಂದ ಅವರಲ್ಲಿ ನಡೆದುಕೊಳ್ಳುವಳು. ಗುರಿಕಾರರೂ ಅಮ್ಮನ ಮಾತು ಮೀರುವವರಲ್ಲ. ಅತ್ತೆಯ ಸೂಚನೆಗೆ ಎರಡೆನ್ನದೆ ಎಲ್ಲಾ ಮನೆಗೆಲಸಗಳಲ್ಲಿ ಎಚ್ಚರವಹಿಸುತಿದ್ದ ಚಂದ್ರಮ್ಮನು ಗುರಿಕಾರರ ಮನೆ, ಮನಸ್ಸನ್ನು ತುಸು ಶಾಂತಿಯಲ್ಲಿಡಲು ಯತ್ನಿಸುತಿದ್ದಳು. ದಿನವುರುಳುತಿತ್ತು. ಹೀಗೆ–ದಿನಾ ಅಬ್ಬಿಯಲ್ಲಿ ನೀರುರುಳುವಂತೆ–ಗುರಿಕಾರರ ಮನೆಗೆ ಅದರ ಮೊರೆತ ಕೇಳುವುದು. ಧೋ.... ಎಂದು.

ಊರ ಹಲವು ಸಾರ್ವಜನಿಕ ಕ್ಷೇತ್ರಗಳಲ್ಲಿ ಮುಂದಾಳುಗಳಾಗಿ ದುಡಿಯುತಿದ್ದ ಗುರಿಕಾರರು ಜನರ ಪ್ರೀತಿವಿಶ್ವಾಸಗಳನ್ನು ಗಳಿಸಿ ಮಾನ್ಯತೆ ಪಡೆಯುತಿದ್ದರೆ–ಚಂದ್ರಮ್ಮನೂ ಮನೆಯೊಳಗಣ ಎಲ್ಲಾ ಕೆಲಸಗಳನ್ನು ನಯನಾಜೂಕುಗಳಿಂದ ನಡೆಸುವ ಜಾಣ್ಮೆಗಾರ್ತಿ. ನೆರೆಕರೆಯವರಲ್ಲಿ, ತಮ್ಮ ಒಕ್ಕಲುಮಕ್ಕಳಲ್ಲಿ ಪ್ರೀತಿಯಿಂದ ನಡೆದುಕೊಳ್ಳುವ, ಅವರಿಗೆ ಕೈತುಂಬ ಕೊಡುವ ಅವಳು ಎಲ್ಲರ ಬಾಯಿಯಲ್ಲೂ ಗುಣವಂತೆ–ಅತ್ತೆಗೂ ಸೊಸೆಯ ಈ ಕಾರು

ಭಾರದ ಕುರಿತು ಸಮಾಧಾನವಿದೆ. ಆದರೆ ಮನೆಗೆ ಬಂದು ಎರಡು ಮೂರು
ವರುಷಗಳು ಕಳೆದರೂ ಒಂದೇ ಒಂದು ಮೊಮ್ಮಗನನ್ನು ಹೆತ್ತು ಮನೆ ತುಂಬಿ
ಸಲಿಲ್ಲವಲ್ಲಾ ಎಂಬ ಬೇಸರ ಆಗಾಗ ಅವರ ದನಿಯಲ್ಲಿ ತುಂಬಿಬರುತ್ತಿತ್ತು.
ತಾನು ಕಣ್ಣುಮುಚ್ಚುವುದರೊಳಗೆ ತನ್ನದೇ ಆದ ಕರುಳಿನ ಚಿತ್ರವೊಂದನ್ನು
ಎತ್ತಿ ಮುದ್ದಿಡಬೇಕೆಂಬ ಅವರಾಸೆಗೆ ತಕ್ಕಂತೆ ಅವರೇನೂ ಸಾಯುವಷ್ಟು
ಪ್ರಾಯಮೀರಿದವರಲ್ಲ. ಮೊಮ್ಮಗನನ್ನು ಕಾಣಬೇಕೆಂಬ ಆಸೆ ಮಾತ್ರ ಅವರಲ್ಲಿ
ಹೆಚ್ಚಾಗಿತ್ತು.

ಇದು ಕಾಲಕ್ರಮೇಣ ಹೆಚ್ಚು ಹೆಚ್ಚಾಗಿ ಸೊಸೆಯೂ ಗರ್ಭತಾಳದ
ಸ್ಥಿತಿಯನ್ನು ಕಂಡ ಕಾವೇರಮ್ಮ ಮನೆಗೆ ಬಂದ ಪ್ರತಿಯೊಬ್ಬರಲ್ಲಿ ತಮ್ಮ
ದೌರ್ಭಾಗ್ಯವನ್ನು ತೋಡಿಕೊಳ್ಳುವರು. ತಮಗೆ ಬಂದ ಹಲವಾರು ಹಿತ
ಚಿಂತಕರ ಸಲಹೆಗಳಂತೆ ಮನೆಯಲ್ಲೊಬ್ಬ ಸಣ್ಣ ಗುರಿಕಾರನು ನಲಿಯುವಂತೆ
ಮಾಡಲು ಹಲವು ಪ್ರಯತ್ನಗಳನ್ನು ಕೈಗೊಂಡಿದ್ದ ಅವರು ಸೊಸೆಯಿಂದ
ಹೆಚ್ಚು ಹೆಚ್ಚಾಗಿ ದಾನಧರ್ಮಗಳನ್ನು ಮಾಡಿಸತೊಡಗಿದರು. ವಿಶೇಷ
ರೀತಿಯಲ್ಲಿ ಮನೆಯ ದೇವರಿಗೆ ಪೂಜೆ ಪುರಸ್ಕಾರಗಳು ನಡೆಯತೊಡಗಿದುವು.
ಸುಬ್ರಹ್ಮಣ್ಯನಿಗೆ ಚಿನ್ನದ ಕೂಸಿನೊಡನೆ ಬೆಳ್ಳಿಯ ತೊಟ್ಟಿಲ ಹರಕೆಹೊತ್ತರು.
ಕೆಲವು ಕಾಲದಿಂದೀಚೆಗೆ ನಿದ್ರಿಸಿದ್ದ ಜಾಗದ ಭೂತಗಣಗಳಿಗೆ ತಿನಿಸಿತ್ತು
ಎಚ್ಚರಿಸಿ ಮನತಣಿಸಿದರು. ಇಷ್ಟೆಲ್ಲಾ ಯತ್ನಗಳು ಗುರಿಕಾರರ ಮನೆಯಲ್ಲಿ
ನಡೆಯುತ್ತಿದ್ದರೂ, ಇದರೆಡೆಯಲ್ಲಿ ಒಂದೆರಡು ವರುಷಗಳು ಉರುಳಿ ಹೋದ
ರೂ, ಮನೆಗೆ ಮಕ್ಕಳಾಗುವ ಚಿಹ್ನೆ ತೋರದುದರಿಂದ ಕಾವೇರಮ್ಮನ ಮುಖ
ಮರಳಿ ಕೆರಳತೊಡಗಿತು. ಬಂಜೆ ಸೊಸೆಯಲ್ಲಿ ಒಂದು ತರದ ಜಿಗುಪ್ಸೆಯೇ
ಅವರಲ್ಲಿ ಹುಟ್ಟಲು, ಮಗನನ್ನು ಅವರು ಎರಡನೇ ವಿವಾಹಕ್ಕಾಗಿ ದಿನಬಿಡದೆ
ಒತ್ತಾಯಿಸುವುದಕ್ಕಾರಂಭಿಸಿದರು.

ಇದರಿಂದ ಇದೀಗ ಗುರಿಕಾರರ ಮನೆ ಮಸಣದಂತೆ — ಯಾರಲ್ಲೂ
ಹೆಚ್ಚು ಗೆಲುವಿಲ್ಲ. ಅತ್ತೆಯು ಮನೆಗೆ ಬಂದು ಹೋದವರೊಡನೆ ಹೇಳಿ
ಕೊಳ್ಳುವಂತೆ ಚಂದ್ರಮ್ಮನಲ್ಲಿ ಈಗೀಗ 'ತಾನು ಬಂಜೆಯೇ' ಎಂಬ ಸಂಶಯ
ವೆದ್ದು ಕಾಡುತ್ತಿದೆ. ಈ ಅನುಭವ ಅವಳನ್ನು ಮೂಕಳನ್ನಾಗಿ ಮಾಡಿದರೂ
ಒಮ್ಮೊಮ್ಮೆ "ತನಗೇನು ಅಷ್ಟು ಪ್ರಾಯವೇ–ತಾನಿನ್ನು ಹೆರಲಾರೆನೇ" ಎಂಬ

ಮನೆಯ ಬಾಗಿಲ ಬಳಿ ಕುಳಿತು ಕಣ್ಣೀರೊರಸುತಿದ್ದಳು. ಮಾತು ಮೌನ ದಲ್ಲಿ ಬೆರೆತು ಅದು ಇಡೀ ರಾತ್ರಿ ಮುಗಿಯುವ ಲಕ್ಷಣದಲ್ಲಿರಲಿಲ್ಲ. ತಾಯಿ ಮಗನಲ್ಲಿ ಭಾಷೆ ತೆಗೆದುಕೊಳ್ಳಲು ಹಟತೊಟ್ಟಿದ್ದರು. ಕೆಳ ಮೊಗಹಾಕಿ ವಿನಯದಿಂದ ಉತ್ತರಿಸುವ ಮಗನ ಮಾತುಗಳೆಲ್ಲವೂ ನಿಷ್ಫಲವಾಗುತಿದ್ದುವು —ನೀರವ ರಾತ್ರಿಯಲ್ಲಿ ಅಬ್ಬಿಯ ಘೋ...ಮೊರೆತಕ್ಕೆ ಗೋಡೆಯ ಹಳೆ ತೂಗು ಗಡಿಯಾರ ಸಮಯವೆಣಿಸುತಿತ್ತು....

ಕ್ಲಕ್-ಕ್ಲಕ್-ಕ್ಲಕ್-ಕ್ಲಕ್-ಕ್ಶರ್ರ್ರ್ರ್.... ಡಿಂಗ್-ಡಿಂಗ್-ಡಿಂಗ್ ಡಿಂ ಗ್... ಗಂಟೆಯ ಸದ್ದನ್ನೆಣಿಸುತಿದ್ದ ಗುರಿಕಾರರು ಹನ್ನೆರಡರ ಬಡಿತದೊಂದಿಗೆ ಒಂದು ನಿಡಿದುಸಿರು ಬಿಟ್ಟರು.— ಅಮ್ಮನ ಮನಸು ಕರಗಿ ಎಂದು ಬದಲಾಗು ವುದೋ ಎಂದು. ಆದರೆ ಕಾವೇರಮ್ಮ ಮನಸ್ಸು ಬದಲಾಯಿಸದೆ ತಮ್ಮ ಕೊನೆಯ ಮಾತನ್ನು ಮಗನಿಗೆಂದರು— "ಮಾಣಿ: ನನ್ನ ಮಾತು ಮೀರಿ ನೀನು ನಿನ್ನ ಹೆಂಡತಿಯೊಡನೆ ಸುಖವಾಗಿರು. ನಾನು ಮಾತ್ರ ಈ ಮನೇಲಿರ ಲಾರೆ. ಕಾಶೀಗಾದ್ರು ಹೋಗಿ........" ತಾಯಿಯ ಮಾತಿನೆಡೆಯಲ್ಲೆ ಗುರಿ ಕಾರರು ದನಿತೆಗೆದರು "ಹಾಗೆನ್ನಡಿರಮ್ಮಾ– ನೀನಲ್ಲದೆ ನಮಗ್ಯಾರು ಬೇಕು ಹೇಳು. ಆದರೆ..." ಮಾತನ್ನು ಮುಂದುವರಿಸಲಾರದ ಅವರು ಮತ್ತೊಮ್ಮೆ ಅಲ್ಲಿಯೇ ಕುಸಿದುಹೋದರು. ಮಗನು ದಾರಿಗೆ ಬರುವ ಮುನ್ಸೂಚನೆ ದೊರೆತ ತಾಯಿ–"ನಿನ್ನನ್ನು ನಾನು ಒತ್ತಾಯಿಸುತ್ತಿಲ್ಲ ಮಾಣಿ. ನಿನ್ನ ಅಮ್ಮ ಒಳ್ಳೇದಕ್ಕೆ ಹೇಳ್ತಾಳಂತ ತಿಳಿ. ನಿಮ್ಮ ಬದುಕಿನ ಆಂದಚೆಂದ ನಾಲ್ಕು ದಿನ ನೋಡಿ ಸಾಯ್ಬೇಕೊಂತ ಇದ್ದೆ. ಆದ್ರೆ ನನ್ನ ಹಣೇಲಿ ಆ ಭಾಗ್ಯ ಬರೀ ಲಿಲ್ಲ! ಅದನ್ನೊದಗಿಸೋ ಪುಣ್ಯವಂತ ಮಗ ನನ್ನ ಹೊಟ್ಟೇಲಿ ಹುಟ್ಟಿಯೇ ಇಲ್ಲಾಂತ ಭಾವಿಸುತ್ತೇನೆ. ಒಂದೋ ನಾನು ಹೇಳೋದಕ್ಕೆ ಒಪ್ಪೊ ಇಲ್ಲಾಂ ದ್ರೆ ಅವ್ರಂತೆ ನನ್ನ ಕೂಡಾ ಮರೆತ್ಬಿಡು–ನಾನಿಲ್ಲಿ ಕ್ಷಣ ನಿಲ್ಲಲಾರೆ ನಿಮ್ಮ ಅನ್ನ ನೀರು ಕೂಡಾ ನನಗ್ಬೇಡ–ಅಯ್ಯೋ ನನ್ನ ಬಾಳ್ವೆಯೇ ಮುಂದೆ ನುಡಿಯ" ಲಾರದ ಕಾವೇರಮ್ಮ ಮಕ್ಕಳಂತೆ ಬಿಕ್ಕಿ ಬಿಕ್ಕಿ ಅಳತೊಡಗಿದರು. ಗುರಿಕಾರರು ಸ್ತಬ್ಧರಾಗಿ ಕುಳಿತಿದ್ದವರು ಅಮ್ಮನ ಅಳುವಿನ ದನಿಗೆ ನಡುಗಿ ಹೋದರು. ಅವರ ಕರುಳನ್ನು ಕಾದಕೆಂಡದಲ್ಲಿ ಎಳೆದಂತಾಯಿತು. ಅಮ್ಮನು ಅಳುವು ದನ್ನು ಅವರು ತನ್ನ ತಂದೆ ಮರಣದ ವೇಳೆ ಕಂಡಿದ್ದರು. ಚಿತ್ರಮಾಲೆಯಂತೆ

ಗಂಡನಿಂದ ಮಾತು ಬರಬಹುದೆಂದು ಕಾದು ಕಾದು ನಿರಾಶಳಾದ ಚಂದ್ರಮ್ಮನೇ ಈಗ ಮಾತು ತೆಗೆಯಬೇಕಾಯಿತು.

"ತಲೆನೋಯುವುದೇ...."

ಮೆದುಮಾತಿನಲ್ಲಿ ಪತಿಯ ಹಣೆಯನ್ನು ತನ್ನ ಕೈಗಳಿಂದ ಮೆತ್ತನೆ ಒತ್ತಿದಳು. ಆವಳ ಕರಸ್ಪರ್ಶದಿಂದ ಗುರಿಕಾರರ ಹೃದಯವೆಷ್ಟು ತಂಪಾಯಿತೋ.... ಪತ್ನಿಯ ಕರಗಳನ್ನು ತನ್ನೆರಡು ಕೈಗಳಿಂದಲೂ ಒತ್ತಿಹಿಡಿದು ನುಡಿದರು.

"ಚಂದ್ರಾ .."

ಗುರಿಕಾರರ ಮೂರನೇ ಕರೆಗೆ ಮೆಲ್ಲನೆ ಹೂಂಗುಟ್ಟಿದಳು ಚಂದ್ರಮ್ಮ.

"ನಾನೇನು ಮಾಡ್ಬೇಕು ಚಂದ್ರಾ"

ಚಂದ್ರಮ್ಮನಿಂದ ನಿಟ್ಟುಸಿರೊಂದು ಮಾತ್ರ ಹೊರಬಿತ್ತು.

"ನೋಡು ಚಂದ್ರಾ ಅಮ್ಮನ ಹಟ-ಅವಳ ಮನಸ್ಸಿನಲ್ಲಿದೆ- ನಮ್ಮ ಒಳ್ಳೆಯದಕ್ಕೆಂದು ಆದ್ರೆ .."

ಚಂದ್ರಮ್ಮ ಮಾತನಾಡಲಿಲ್ಲ.

"ಈಗ ನಾನೇನು ಮಾಡಬೇಕು ಚಂದ್ರಾ....ನೀನೇ ಹೇಳು"

ಒತ್ತಿಬರುವ ಗದ್ಗದ ಕಂಠದಲ್ಲಿ ಚಂದ್ರಮ್ಮನೆಂದಳು.

"ನಾನೇನು ಹೇಳಲಿ"

"ನನ್ನ ಎರಡನೇ ಮದುವೆ ವಿಚಾರ-ನಿನ್ನ ಅಭಿಪ್ರಾಯ ಹೇಳು-ಅಮ್ಮ ನನ್ನು ತಿರುಗಿಸಲು ಅಸಾಧ್ಯ-ನೋಡು ಚಂದ್ರಾ ನಾನೊಬ್ಬನೇ ತಂದೆ ತಾಯಿ ಗಳಿಗೆ ಮಗ-ನನ್ನನ್ನೆ ನಂಬಿ ಬದುಕಿ ಬಂದವರು-ಆದರಲ್ಲೂ ತಂದೆಯಿಾಗ ಇಲ್ಲ -ಇಲ್ಲಿ ಅವರಿದ್ದರೂ ಹೀಗಾಗುತ್ತಿರಲಿಲ್ಲ-ಅಮ್ಮ ಹಟ ತೊಟ್ಟಿದ್ದಾಳೆ-ನಾನೊ ಪ್ಪದುಳಿದ್ರೆ ನಾಳೆ ಮನೆ ಬಿಟ್ಟೆ ಹೋಗ್ತಾಳೆ-ಹಾಗಾದ್ರೆ ನಾವಿದು-ಗಂಡು ಮಗ ನಾನಿದ್ದು-ಊರು ಏನಂದೀತು ಚಂದ್ರಾ... ನೀನೇ ಯೋಚ್ಸು-ಅಮ್ಮನ ಮಾತು ಮಿಾರಲಾರೆಂತ ಸಾಯೋ ಹೊತ್ತು ತಂದೆಗೂ ಮಾತು ಕೊಟ್ಟಿದ್ದೆನೆ. ಹೀಗಾಗುವುದೆಂದು ನಾನೆಂದೂ ಎಣಿಸಿರಲಿಲ್ಲ ಚಂದ್ರಾ .."

ಚಂದ್ರಮ್ಮ ಉತ್ತರಿಸಿದಳು "ಮಾವನಿಂದು ಬದುಕಿ ಉಳೀತಿದ್ರೆ ಖಂಡಿತ ಹೀಗಾಗುತ್ತಿರಲಿಲ್ಲ]"

ಕ್ಷಣಹೊತ್ತು ಮೌನವಾವರಿಸಿತು. ಕೊನೆಗೆ ಗುರಿಕಾರರೇ ಹೇಳಿದರು "ಚಂದ್ರಾ ನೀನು ನನ್ನ ಮಾತು ನಡೆಸಬೇಕು. ನಾನು ಬೇರೆ ಯಾರಲ್ಲಿ ಕೇಳಲಿ ಚಂದ್ರಾ ..."

ಗಂಡನ ಮಾತುಗಳು ಅವಳೆದೆಯನ್ನು ಕೊರೆಯುತಿದ್ದುವು. ಗಂಡನನ್ನು ಮದುವೆಯಾಗಲು ಬಿಡದಿದ್ದರೆ ಅತ್ತೆಯನ್ನು ಹೊರಹಾಕಿದ ಸೊಸೆಯಾಗು ವವಳು-ಒಪ್ಪಿಗೆಯಿತ್ತರೆ ಹೊಸತೊಬ್ಬಳ ನಡುವೆ ಸಂಸಾರ ಮಾಡುವುದನ್ನು ಆವಳು ನೆನಸಲಾರದಾದಳು—ಕ್ಷಣ ಹೊತ್ತು ಉಸಿರೆತ್ತದ ಚಂದ್ರಮ್ಮ ನಡು ಗುವ ಗಂಟಲಲ್ಲಿ ಹೇಳಲಾರದೆ ಹೇಳಿದಳು—"ನಿಮ್ಮಮ್ಮನ ಮಾತು ಮೀರ ಬೇಡಿ.... ಅತ್ತೆಯ ಇಷ್ಟದಂತೆಯೆ ಆಗಲಿ.... ನನಗಾಗಿ ಚಿಂತೆ ಬೇಡ .. ನಿಮ್ಮ ಸಂತೋಷ...."

ಪತ್ನಿಯ ಎರಡು ಕೈಗಳನ್ನು ಮುಖಕ್ಕೆ ಹಚ್ಚಿಕೊಂಡು ಗುರಿಕಾರರೆಂದ ರು—"ಹಾಗೆನ್ನದಿರು ಚಂದ್ರಾ.... ನಾನು ನಿನ್ನಲ್ಲಿ ಸಂತೋಷದಿಂದ ಒಪ್ಪಿಗೆ ಪಡೆಯುತ್ತಿಲ್ಲ"

"ಇಲ್ಲ.... ನನ್ನ ಸಂತೋಷ.... ನೀವು ಮದುವೆಯಾಗಿರಿ" ಅಳುವನ್ನು ತಡೆಯಲೆತ್ನಿಸಿದರೂ ಚಂದ್ರಮ್ಮನಿಗೆ ಆಳು ತಡೆಯಲಾಗಲಿಲ್ಲ—ಉಕ್ಕಿಬಂದ ದುಃಖದಲ್ಲಿ ಬಿಕ್ಕಿ ಬಿಕ್ಕಿ ಆಳಹತ್ತಿದಳು. ಆವಳ ಉತ್ತರವನ್ನು ನುಂಗಿಕೊಂಡ ಗುರಿಕಾರರೂ ವೈಸವರಿ ಪತ್ನಿಯನ್ನು ಸಂತೈಸಿದರು.

"ಚಂದ್ರಾ.... ನಿನಗವಳು ತಂಗಿ. ನೀವಿಬ್ಬರೂ ಕೂಡಿನಡೆದು ಈ ಮನೆ ಬೆಳಗಬೇಕು. ನೀನವಳ ಅಕ್ಕನಿರುತ್ತಿ ... ಆ ಭಾರ ನಿನ್ನದು ...... ಹೇಗೆ... ... ಚಂದ್ರಾ ..." ಪತ್ನಿಯ ಉತ್ತರವನ್ನು ಬಹಳ ಆಶೆಯಿಂದ ಕಾಯುತಿದ್ದ ಗುರಿ ಕಾರರು — ಪತ್ನಿಯಿಂದ ಉತ್ತರವಿಲ್ಲದುದನ್ನು ತಿಳಿದು ಗಳಿಗೆಗೊಮ್ಮೆ ಕರೆದು ವಿಫಲರಾಗಿ ಮಡದಿಯ ಮೌನವೇ ಸಮ್ಮತಿಯ ಲಕ್ಷಣವೆಂದು ಬಗೆದು ನಿಡಿ ದುಸಿರೊಂದನ್ನು ಬಿಟ್ಟರು. ಬೆಳಗಿನ ಜಾವಕ್ಕಾದರೂ ಗುರಿಕಾರರಿಗೊಂದು ಸಣ್ಣ ನಿದ್ದೆ ಬಂದಿರಬೇಕು. ಚಂದ್ರಮ್ಮ ಮಲಗಿದಂತೆಯೇ ಎದ್ದಿದ್ದಳು. ಬೆಳಗಿನ ಜಾವಕ್ಕೆ ಆವಳ ತಲೆದಿಂಬು ಒದ್ದೆಯಾಗಿತ್ತು. ಬೆಳಗ್ಗಿನ ನಿದ್ದೆಯಲ್ಲಿ ರುವ ಮಗನನ್ನು ತಾಯಿಯೇ ಕೂಗಿ ಎಬ್ಬಿಸಿದರು. ಮಗನಿಗೆ ಬಲವಾದ ತಲೆ

ಸಿಡಿತವೆಂದು ತಿಳಿದ ಕಾವೇರಮ್ಮ ಗುರಿಕಾರರ ತಲೆಗೆ ಮದ್ದು ಹಚ್ಚಿ ತಿಕ್ಕ ಹತ್ತಿದರು.

ಂ ಂ ಂ ಂ ಂ

ಇನ್ನೊಂದು ತಿಂಗಳಲ್ಲೇ ಗುರಿಕಾರರಿಗೆ ಮದುವೆಯೆಂಬ ನಿಶ್ಚಿತದ ಸುದ್ದಿಯೊಂದು ಹೆಚ್ಚು ತಡವಿರದೆ ಸ್ಪಷ್ಟವಾದ ಆಕಾರದಲ್ಲಿ ಊರಲ್ಲೆಲ್ಲಾ ಹರಡಿಬಿಟ್ಟಿತು. ಕಾವೇರಮ್ಮನು ಬಹಳ ಉತ್ಸಾಹದಿಂದ ಮಗನ ವಿವಾಹ ಸನ್ನಾಹ ಮಾಡುತಿದ್ದರು. ಗುರಿಕಾರರು ವೈಪರಿವೆಯಿಲ್ಲದಂತೆ ಕಾಲಹರಣಮಾಡುತಿದ್ದರೆ ಚಂದ್ರಮ್ಮನು ಮನೆಯ ಕೆಲಸ ಮುಗಿಸಿ ಉಳಿದ ಹೊತ್ತು ತನ್ನ ಯೋಚನೆಯಲ್ಲಿ ಸಮಯ ದೂಡುತಿದ್ದಳು. ಮನೆಕೆಲಸ ಮುಗಿಸಿದ ಅವಳಿಗೆ ಮಧ್ಯಾಹ್ನದ ವಿರಾಮದ ಹೊತ್ತು ಈಗೀಗ ಮನೆಯಲ್ಲಿ ಕುಳಿತುಕೊಳ್ಳಲು ಆಗುತ್ತಿರಲಿಲ್ಲ. ಸುತ್ತು ಬಯಲಲ್ಲಿ ತಿರುಗಾಡಿ, ಅಬ್ಬಿಯ ಬಳಿಗಾಗಿ ಒಕ್ಕಲು ಮನೆಗಳನ್ನು ಮಾತಾಡಿಸುತ್ತಾ ಬಂದರೆ ತುಸು ಮನಸ್ಸು ಹಗುರಾಗುತಿತ್ತು.

ಅಂದೂ ಮಧ್ಯಾಹ್ನ ಊಟ ತೀರಿಸಿ ಮನೆಯಿಂದ ಹೊರಬಿದ್ದ ಚಂದ್ರಮ್ಮನೊಡನೆ ಬೆಳ್ಳಿಯೂ ಬಾಲವಲ್ಲಾಡಿಸುತ್ತಾ ಹೊರಟಿತು. ಚಂದ್ರಮ್ಮನು ಎಲ್ಲಿ ಹೋದರೂ ಅದು ಸಿದ್ಧ! ಚಂದ್ರಮ್ಮನಿಗೂ ಬೆಳ್ಳಿಯೆಂದರೆ ಪ್ರಾಣ. ಅವಳ ಮದುವೆಯಾದ ವರುಷವೇ ಅದರ ತಾಯಿ ಅದನ್ನು ಹಡೆದು ಸತ್ತಿತ್ತು. ತಾಯಿಯಂತೆ ಹಾಲುಣಿಸಿ ಅದನ್ನು ಅವಳೆ ಸಾಕಿದಳು ಆದ್ದರಿಂದ ದೊಡ್ಡದಾದ ಮೇಲೂ ಬೆಳ್ಳಿ ಅವಳನ್ನು ಎಲ್ಲಿಗೆ ಹೋಗುವುದಿದ್ದರೂ ಬಿಟ್ಟುಬಿಡದು.

ಚಂದ್ರಮ್ಮನು ತೋಟಕ್ಕಿಳಿದು, ಗದ್ದೆಯಂಚಿನಲ್ಲಿ ನಡೆದು–ಅಬ್ಬಿಯ ಬಳಿಸಾರಿ ನಡೆದಳು. ಅಬ್ಬಿಯುವಳನ್ನು ಮರಮರಳಿ ಕರೆಯುತಿತ್ತು.

ಧಡ್–ಧಡಾಲ್...ಧಡ್–ಧಡಾಲ್... ಛಟ್-ಛಟಾಲ್... ಛಟ್-ಛಟಾಲ್ ಬೇಸಗೆಯಲ್ಲಿ ವೈತೆಗೆಯಲಾರಂಭಿಸಿದ ತೊರೆಯು ಮಲ್ಲಿಗೆಯರಳನ್ನು ಚೆಲ್ಲಿದಂತೆ ನೊರೆಯುತಿತ್ತು—ನೀರು ನೀಲ ಆಗಸದಂತೆ ಶುಭ್ರವಾಗಿತ್ತು. ಅಬ್ಬಿಯಲ್ಲಿ ನೀರು ಧುಮುಕುವ ಈ ನೋಟ ಊರವರಿಗೇನೂ ಹೊಸತಿನದಲ್ಲ. ಆದರೆ ಪ್ರಾಯಾನುಭವಗಳ ವೈವಿಧ್ಯ, ದೈನಂದಿನ ಮಾನಸಿಕ ಪ್ರಭೇದಗಳ ತಿರುಗಣೆಯ ಸುಳಿಗೆ ಈ ನೋಟವು ಅಬ್ಬಿಯ ಮೊರೆತವು ದಿನದಿನಕ್ಕೂ ನವನವೀನವಾಗಿ ತೋರುವುದು.

ಚಂದ್ರಮ್ಮನು ಅಬ್ಬಿಯ ಮಡಿಲ ಬಂಡೆಯೊಂದರಲ್ಲಿ ಕಾಲೂರಿದಳು... ಅವಳಿಗೆ ಮದುವೆಯಾಗುವ ಮೊದಲು—ಮದುವೆಯ ಹೊಸದರಲ್ಲಿ—ಅತೀ ಕಿರಿಯವಳಿರುವಾಗ ಕೂಡಾ ಅಬ್ಬಿಯ ಚಿರಪರಿಚಯವಿದೆ. ಮದುವೆಗೆ ಮೊದಲೇ ಗುರಿಕಾರರ ಮನೆಯವಳಿಗೆ ಸೋದರಮಾವನ ಮನೆ. ದೊಡ್ಡ ಗುರಿಕಾರರ ತಂಗಿ ಚಂದ್ರಮ್ಮನ ತಾಯಿ, ಮಗಳೊಡನೆ ತವರುಮನೆಯಲ್ಲಿ ತಿಂಗಳು ಕಟ್ಟಲೆ ನಿಲ್ಲುವುದಿತ್ತು. ತಾಯಿಯನ್ನು ಬಿಟ್ಟು ಚಂದ್ರಮ್ಮನೇ ಅತ್ತೆಯ ಮನೆಯಲ್ಲಿ ನಿಲ್ಲುತಿದ್ದಳು. ಶಾಲಾ ರಜಾಕಾಲದಲ್ಲಿ ಚಂದ್ರಮ್ಮ ಗುರಿಕಾರರು ಕೂಡಿ ಆಡುತಿದ್ದರು. ಗುರಿಕಾರರನ್ನು ಆಗವಳು ಕರೆಯುತಿದ್ದುದು 'ಭಾವ' ಎಂದು. ಭಾವನೊಡನೆ ಅಬ್ಬಿ ತೋಟ ಗದ್ದೆ ಗುಡ್ಡಗಳನ್ನು ಸುತ್ತುತಿದ್ದಳು ಹಿರಿಯರ ಕಣ್ಣುತಪ್ಪಿಸಿ ಭಾವನು ಮರಹತ್ತಿ ಕಿತ್ತಿಳೆ ಪೇರಳೆ ಮಾವುಗಳನ್ನು ಕೀಳುತಿದ್ದನು. ಕಲ್ಲುಹೊಡೆದು ಗೇರುಹಣ್ಣುಗಳನ್ನುದುರಿಸುತಿದ್ದನು. ಭಾವನ ಸಾಮರ್ಥ್ಯವನ್ನು ಚಂದ್ರಮ್ಮ ಬಾಯಿತುಂಬಾ ಹೊಗಳುತಿದ್ದಳು. ಚಂದ್ರಮ್ಮನು ಕುಳಿತಲ್ಲಿಂದಲೇ ಸುತ್ತು ನಿಟ್ಟಿಸಿದಳು ಬಾಲ್ಯದಲ್ಲಿ ತಮಗೆ ಹಣ್ಣು ಹೂವುಗಳನ್ನಿತ್ತ ಗಿಡಮರಗಳು! ಚಂದ್ರಮ್ಮ ಲಂಗದ ಹುಡುಗಿಯಾಗಿ ಅವುಗಳ ತಣ್ಣೆಳಲಿಗೆ ದೃಷ್ಟಿಹಾಯಿಸಿದಳು.

ಚಿಕ್ಕಂದಿನಲ್ಲಿ ಗುರಿಕಾರರ ಅಟ್ಟಹಾಸವೇನು? ದಿನವೂ ಅಬ್ಬಿಯಲ್ಲಿ ಊರ ಮಕ್ಕಳ ತಂಡ ಕಟ್ಟಿಕೊಂಡು ಪಂಥಹಾಕಿ ಓಡುವರು, ಹಾರುವರು, ಈಸುವರು—ಅಬ್ಬಿಯ ಮಡಿಲಲ್ಲಿ ಸಮಪ್ರಾಯದ ಮಕ್ಕಳೆಲ್ಲಾ ಈಜಲು ಸಾಲುಕಟ್ಟಿ ನಿಂತರೆ ಗುರಿಕಾರರೇ ಮೊದಲು ಆಚೆದಂಡೆಯನ್ನು ಸೇರುವರು. ಸಂಗಡಿಗರ ಮುಖಕ್ಕೆ ನೀರೆರಚಿ ಓಡಿಸುವರು. ಇದಿರು ಬಂದವರನ್ನು ಜುಟ್ಟು ಹಿಡಿದು ಮೂಗು ಕಟ್ಟುವ ವರೆಗೆ ನೀರಲ್ಲದ್ದುವರು. ಮೇಯುವ ಎತ್ತುಗಳ ಬಾಲಹಿಡಿದೋಡಿಸುವರು. ಬಾಲ್ಯದಲ್ಲಿ ಪುಡಾರಿಯಾಗಿದ್ದ ಗುರಿಕಾರರ ಮನಸ್ಸು ಈಗ ಶಾಂತವಾಗಿ ಗಂಭೀರವಾಗಿದೆ—ಇಲ್ಲಿ ನೆಗೆದು ಹಾರುವ ಅಬ್ಬಿಯ ನೀರು ತುಸು ಕೆಳಗೆ ದೊಡ್ಡ ಮಡುವಾಗಿ ಪ್ರವಹಿಸುವಂತೆ...

ಅಬ್ಬಿಯ ಮಡಿಲ ಮಕ್ಕಳ ಇನ್ನೊಂದು ಸೊಗಸಾದ ಆಟ ನೀರುಕಲ್ಲಾಟ. ಹಣತೆಯಾಕಾರದ ಜಿಬಿಲಿಕಲ್ಲುಗಳನ್ನಾರಿಸಿ ನೀರಮೇಲೆಯೇ ಸಿಡಿದು ಹಾರುತ್ತಾ ಹೋಗುವಂತೆ ರಭಸದಿಂದ ಎಸೆಯುವರು. ಈ ಆಟಕ್ಕೆ ಇಲ್ಲಿಂದ ಅರ್ಧ

ಫರ್ಲಾಂಗಿನಷ್ಟು ಕೆಳಗಿರುವ ಇದರ ಕೆಳವ್ಮೈಯು ಮಡುವೇ ಯೋಗ್ಯ ಸ್ಥಳವಾಗಿದೆ.

ಈ ಮಡುವಿನಲ್ಲಿ ನೀರು ಸುಳಿಸುಳಿಯಾಗಿ ಸುತ್ತುತಿದೆ. ತೊರೆಯೇ ಇಲ್ಲಿ ಅಡ್ಡ ತಿರುಗುವುದರಿಂದ ಹೀಗಾಗಿರಬೇಕು. ಕಾಡಿಗೆಯಷ್ಟು ಕಪ್ಪಾದ ನೀರು ಮಡುವಿನ ಆಳವನ್ನು ಸೂಚಿಸುತ್ತದೆ. ಮಡುವಿನ ತಳ ಕಂಡುಹಿಡಿದವರಿಲ್ಲವಂತೆ. ತೊರೆಯ ಇತರ ಕಡೆಗಳಲ್ಲಿ ಬಲೆಬೀಸುವವರು ಈ ಮಡುವಿನಲ್ಲಿ ಬಲೆಹಾಕುವುದಿಲ್ಲ. ಹಾಕಬಾರದೆಂದೂ ನಿಯಮವಿದೆ. ಚಿನ್ನದ ಬಣ್ಣದ ತೊಡೆಗಾತ್ರದ ಮೀನುಗಳು ಹಿಂಡುಹಿಂಡಾಗಿ ಮೇಲೆ ಬಂದರೂ ಅವುಗಳನ್ನು ಹಿಡಿಯಲು ಜನರು ಹಿಂಜರಿಯುತ್ತಾರೆ. ಇಲ್ಲಿಗೆ ಒಂದು ಇತಿಹಾಸವಿದೆ-- ಈ ಮಡುವಿನಾಳದಲ್ಲಿ ಒಂದು ದೇಗುಲವಿದೆಯಂತೆ. ಹಿಂದೆ ಅಲ್ಲಿಂದ ಪೂಜಾ ಕಾಲದಲ್ಲಿ ಗಂಟೆ ಶಂಖ ವಾಲಗ ಧ್ವನಿ ಕೇಳಿಸುತಿತ್ತು—ಇದನ್ನು ಕೇಳಿದ ಊರ ದೊಡ್ಡ ಗುರಿಕಾರರ ಪ್ರಾಯದ ಹಳಬರು ಇನ್ನೂ ಜೀವಿಸಿರುವರು. ಈಗಿನ ಯುವಕರು ಅದಕ್ಕೆ ಕಿವಿಯೇ ಕೊಡುವುದಿಲ್ಲ. ಆದರೆ ಆ ಸ್ಥಳಪುರಾಣದ ಕತೆಗೆ ಆಶ್ಚರ್ಯಪಡುತ್ತಾರೆ. ಹಿಂದೆ....

ಕೆಲವು ತಲೆಮಾರುಗಳಷ್ಟು ಹಿಂದೆ—ಊರಿನಲ್ಲಿ ಬೆಳೆಸುವ ಪೈರಿಗೆ ಕೆಳಲೋಕದಿಂದ ಆ ದೇಗುಲದ ದನಗಳು ಈ ಮೇಲು ಲೋಕಕ್ಕೆ ಬರುತಿದ್ದುವು. ಊರ ದನಗಳ ಕಾಟವೆಂದು ಊರ ಗೌಡನೊಬ್ಬನು ಇದಕ್ಕೆ ಕಾದು ಕುಳಿತನು ಹಗಲು ಕಾದರೆ ರಾತ್ರಿ ಪೈರು ನಾಶವಾಗುತಿತ್ತು ಒಮ್ಮೆ ರಾತ್ರಿಯ ಬೆಳದಿಂಗಳಿಗೆ ಈತ ಎವೆಯಿಕ್ಕದೆ ಕಾದುಕುಳಿತಿದ್ದ. ನಡುರಾತ್ರಿಯ ಸಮಯಕ್ಕೆ ಒಮ್ಮೆಗೆ ಹೊಲದಲ್ಲಿ ಏಳು ಕೆಂದಕಪಿಲೆ ದನಗಳು ಕಾಣಿಸಿಕೊಂಡುವು. ಗೌಡನಿದನ್ನು ನೆರೆಯ ದನಗಳೆಂದೇ ಅಟ್ಟಿ ಒಂದನ್ನು ಬೆನ್ನಟ್ಟಿ ಹಿಡಿದು ದೊಡ್ಡಿಗೆ ಕಟ್ಟುವ ಸಾಧನೆಯಲ್ಲಿ ಅದರ ಬಾಲ ಹಿಡಿದುಕೊಂಡನು. ಕಪಿಲೆ ದನವೊಂದು ಬಯಲಿಡೀ ಓಡಿತು. ಗೌಡನೂ ಅದರ ಬಾಲಬಿಡಲಿಲ್ಲ. ಕಡೆಗೆ ಆ ದನವು ಗೌಡನೊಡನೆ ಇದೇ ಮಡುವಿಗೆ ಹಾರಿತಂತೆ. ಗೌಡನು ಮಡುವಿನಾಳದಲ್ಲಿರುವ ದೇಗುಲವನ್ನು ಸೇರಿದನು. ಎಂಥಹ ದೃಶ್ಯ! ಪೂಜೆ ನಡೆಯುತಿತ್ತು! ಸಂಪತ್ತು! ಸೌಭಾಗ್ಯಗಳ ನಿಧಿಯಾಗಿತ್ತು ಆ ಸ್ಥಳ! ಗೌಡನಿದನ್ನು ಅಲ್ಲಿಯವರೊಡನೆ ಏಳೆಂಟು ದಿನ ಅನುಭವಿಸಿದನು. ತನ್ನೂರಲ್ಲಿ ಕಾಣೆ

ಯಾಗಿರುವ ಹಲವು ಪರಿಚಿತ ಮುಖಗಳನ್ನು ಅವನಲ್ಲಿ ಕಂಡನು. ಅವರು ಗೌಡನನ್ನು ಗುರುತಿಸಿದರೂ ಊರನ್ನು ಮರೆತವರಂತೆ ಅವನಲ್ಲಿ ಏನೊಂದನ್ನೂ ವಿಚಾರಿಸಲಿಲ್ಲ. ಅಲ್ಲಿ ಅವರು ಹೊಸ ಜನ್ಮವನ್ನು ಪಡೆದಂತಿದ್ದರು. ಗೌಡನಿಗಾದರೆ ಗಳಿಗೆ ಗಳಿಗೆ ಊರಿನ ಹೆಂಡತಿ ಮಕ್ಕಳ ನೆನಪಾಗುತಿತ್ತು. ತನ್ನೂರಿಗೆ ಮರಳಿ ಮರುಳುವೆನೆಂದ ಗೌಡನ ಮಾತಿಗೆ ಅಲ್ಲಿಯವರಿಗೆ ಆಶ್ಚರ್ಯವಾಗ ಹತ್ತಿತು. ಗೌಡನು ಊರನ್ನು ಕಾಣುವ ಆಶೆಯಲ್ಲಿ ದಿನವೂ ಕೊರಗಿ ಕಂಗಾಲಾಗಲು ದೇಗುಲದ ಮುಖ್ಯಾಧಿಕಾರಿಯು ಗೌಡನಿಗೆ "ನೀನು ನಾಳೆ ನಿನ್ನೂರಿಗೆ ಹೋಗಬಹುದು–ಆದರೆ ಯಾರಿಗೂ ಇಲ್ಲಿಯ ಸುದ್ದಿ ಹೇಳಬಾರದು— ಜೋಕೆ! ಇದರಿಂದ ನಿನಗೆ ಸಂಪತ್ತು ಸಮೃದ್ಧಿ ಹೆಚ್ಚಾಗಲಿ"–ಎಂದು ಹರಸಿ ಹೋಗುವ ಉಪಾಯ ಹೇಳಿಕೊಟ್ಟನು. ಗೌಡನು ತನ್ನನ್ನು ಕರೆದುತಂದ ಕಪಿಲೆಯನ್ನೇ ಹುಡುಕಿ ಅದರ ಬಾಲ ಹಿಡಿದುಕೊಂಡನು. ಮರುದಿನ ಬೆಳಗಿನ ಹೊತ್ತಿಗೆ ಆತ ಅವನ ಹೊಲದಲ್ಲಿರುವುದನ್ನು ಕಂಡು ಅವನಿಗೇ ಆಶ್ಚರ್ಯವಾಯಿತು.

ಹಲವು ದಿನಗಳಿಂದ ಮೊಗತೋರಿಸದಿದ್ದ ಗೌಡನ ಬರವನ್ನು ಕಂಡ ನೆರೆಕರೆಯವರು ಎಲ್ಲಿ ಹೋಗಿದ್ದೆಯೆಂದು ಪ್ರಶ್ನಿಸಿದರು. ಆಗ ಗೌಡನು ಘಟ್ಟಕ್ಕೆ-ಮಲೆಗೆ–ಕಾಫಿತೋಟಕ್ಕೆ ಎಂದು ತಪ್ಪಿಸಿ ಸುದ್ದಿಯನ್ನು ಬಚ್ಚಿಟ್ಟನು. ಇದರೆಡೆಯಲ್ಲಿ ಗೌಡನ ಸಂಪತ್ತೂ ಹೆಚ್ಚಿತು.

ಒಂದು ದಿನ–ಗೌಡನಿಗೆ ಹೆಚ್ಚು ಕಾಲ ಗುಟ್ಟನ್ನು ಬಚ್ಚಿಟ್ಟುಕೊಳ್ಳಲಾಗಲಿಲ್ಲ. ಏಕಾಂತವಿರುವ ಹೊತ್ತು ಮಡದಿಗೆ ಕತೆಹೇಳಿದನು. ಮಾತು ಮುಗಿಸಿದ ಗೌಡನಿಗೆ ಮುಂದೆ ಬಾಯಿಬಾರದಾಯಿತು. ಮುಂದೆ ಸಾಯುವವರೆಗೆ ಕಷ್ಟವನ್ನನುಭವಿಸಿ ಗೌಡನು ಸತ್ತುಹೋದರೂ ಊರ ತನ್ನವರಿಗೆ ಈ ಕತೆಯನ್ನು ಕೊಟ್ಟು ಗೌಡನು ಹುತಾತ್ಮನಾದನು. ಇಂದಿಗೂ ಗೌಡನ ಆ ಹೆಸರಾದ ಮನೆತನವು ಮಡುವಿನ ಬಳಿಯಲ್ಲಿದೆ.

ಈಗಲೂ ಸಂಸಾರ ಸಾಕೆನಿಸಿದವರು ಮಡುವನ್ನಾಶ್ರಯಿಸುವರೆಂದು ಜನರು ನಂಬುತ್ತಾರೆ. ಊರ ಜನ ಕೆಲಕಾಲ ಕಾಣೆಯಾಗಿ ಬಾರದಿದ್ದರೆ ಮಡುವಿಗೆ ಹಾರಿದರೆಂದೇ ನೆನೆಯುತ್ತಾರೆ. ಎಂಥ ಬೇಸಗೆಯಲ್ಲೂ ಅದಕ್ಕಿಳಿದು ಅದರ ತಳ ಶೋಧಿಸುವ ಧೈರ್ಯ ಜನರಿಗಿಲ್ಲ. ಇಲ್ಲಿಯ ಮಕ್ಕಳು ಈಗ

ಅಬ್ಬಿಯ ದನಿಗೆ ಚಂದ್ರಮ್ಮ ತನ್ನ ಮರುಕದ ದನಿಯನ್ನು ಕೂಡಿಸು ತಿದ್ದಳು. ಬೆಳ್ಳಿನಾಯಿ ಒಡತಿಯ ಕಾಲಬುಡದಲ್ಲಿ ಮೈಚಾಚಿ ಮಲಗಿತ್ತು. ಕೆಳಗೆ ಕಣ್ಣಿಟಕುವ ದೂರದಲ್ಲಿ ಮಡುವಿನ ನೀರು ಕಾಡಿಗೆಯಂತೆ ಬಿಸಿಲಝು ಳಕ್ಕೆ ಹೊಳೆಯುತಿತ್ತು. ಮಡುವಾದೂ ತನಗೆ ಆಶ್ರಯ ಕೊಡಬಾರದೇ ಎಂದು ಚಂದ್ರಮ್ಮ ಎದೆಮರುಕದ ದನಿಯಿಡುತಿತ್ತು. ಗೋಪಿ ನೀರುಕುಡಿದು ಗುಡ್ಡೆಗೆ ಮರಳುವ ಹೊತ್ತು ಒಡತಿಯ ಬಳಿ ಸಾರಿ ತನ್ನ ಕೊರಳೆತ್ತಿ ಮೊಗದ ಕಣ್ಣೀರಿಗೆ ಕಾರಣ ಕೇಳುತಿತ್ತು. ಚಂದ್ರಮ್ಮ ಎದ್ದು ಗೋಪಿಯ ಮೈ ಸವರಿದಳು.

ಗೋಪಿಯ ಕ್ಷಣ ಹೊತ್ತು ಒಡತಿಯ ಬಳಿ ನಿಂತು ತನ್ನ ಸಂಗಡಿಗ ರೊಡನೆ ಮುಂದಾಯಿತು. ಬೆಳ್ಳಿಯು ಬಾಲಬೀಸಿ ಎದ್ದುನಿಂತಿತು. ಚಂದ್ರಮ್ಮ ನಿಗೆ ಒಮ್ಮೆ ನಾಗುವಿನ ಮನೆ ಕಾಣಬೇಕೆಂದಾಯಿತು. ಹಾಗೆ ಅಲ್ಲಿಂದ ಕಾಲ್ತೆಗೆದಳು. ಗದ್ದೆಗೆ ಹತ್ತಿ ಅದರ ಅಂಚಿನಲ್ಲೆ ನಡೆದು ಪಕ್ಕದ ತೋಟದ ಬಳಿಗಾಗಿ ನಡೆದಳು. ಮಳೆಗಾಲ ಮುಗಿಸಿ ನಿಂತ ತೋಟದ ಮರಗಳು ಹಣ್ಣಡಕೆಯ ಭಾರಕ್ಕೆ ತೂಗುತ್ತಿದ್ದುವು. ಗದ್ದೆಯಲ್ಲಿ ಹಚ್ಚಹಸುರಿನ ಪೈರು ನಳನಳಿಸುತಿತ್ತು. ಬೆಳ್ಳಿ ಬಾಲವಲ್ಲಾಡಿಸುತ್ತಾ ಹಿಂದೆ ಬರುತಿತ್ತು. ಚಂದ್ರಮ್ಮ ಸೋಗೆ ಹೊದೆಸಿದ ಸಾಧಾರಣ ಮನೆಯೊಂದರ ಮುಂದೆ ನಿಂತು ಕೂಗಿದಳು.

"ನಾಗೂ ....."

ಮನೆಯೊಳಗಿದ್ದ ನಾಗು ಒಡತಿಯ ದನಿಗೆ ಓಗೊಟ್ಟು ಹೊರಬಂದಳು. ಒಡತಿಗಾಗಿ ಜಗಲಿಯಲ್ಲಿ ಮಣೆಯಿಟ್ಟಳು.

ಚಂದ್ರಮ್ಮನಿಗೆ ತನ್ನ ಎಲ್ಲಾ ಒಕ್ಕಲು ಹೆಣ್ಣುಗಳಲ್ಲಿ ನಾಗುವಿನಲ್ಲಿ ಹೆಚ್ಚು ನಂಬಿಕೆ ಪ್ರೀತಿ–ವಿಶ್ವಾಸ; ಅವಳು ನಾಗುವಿನಲ್ಲಿ ಹೇಳಿರದ ಗುಟ್ಟಿಲ್ಲ- ತನ್ನಿಂದ ಹೆಚ್ಚು ಪ್ರಾಯದ ಹಿರಿಯಳಲ್ಲಿ ಆಕೆಗೆ ತಾಯ್ತನದ ಪ್ರೀತಿ. ನಾಗು ವಿಗೂ ಚಂದ್ರಮ್ಮನೆಂದರೆ ಒಂದು ಗಟ್ಟಿ ಬಂಗಾರ; ಧನಿ ವಕ್ಕಲುಗಳ ಭೇದ ಭಾವನೆ ಅವರಲ್ಲಿರಲಿಲ್ಲ. ನಾಗು ಒಡತಿಯನ್ನು ಚಂದ್ರಕ್ಕನೆಂದೇ ಕರೆಯು ತ್ತಾಳೆ. ಈ ಸ್ವಾತಂತ್ರ್ಯಸಲುಗೆ ನಾಗುವಿಗೆ ಮಾತ್ರವಿತ್ತು. 'ಧನಿಯರ ಒಡತಿ ಮನೆಗೆ ಬಂದು ಕುಳಿತಾಗ ಏನನ್ನು ತಿನ್ನಲು ಕೊಡಲಿ' ಎಂದು ನಾಗು

ದನಗಳ ಬಾಲ ಹಿಡಿದೋಡಿಸುವುದಿಲ್ಲ. ಮಡುವಿನಲ್ಲಿಳಿದು ಈಜುವುದಿಲ್ಲ.

ಈ ಮಡುವು ಊರಿಗೆ ಈ ರೀತಿಯಿಂದ ಪವಿತ್ರವಾಗಿದೆ. ದನಕರುಗಳು ಸಕಾಲಕ್ಕೆ ಕರು ಹಾಕದಿದ್ದರೆ ಇಲ್ಲಿಗೆ ಹರಕೆ ಹೇಳುತ್ತಾರೆ. ಮಡುವಿಗೆ ಬೊಚ್ಚಲ ದನದ ಹಾಲನ್ನು ಎರೆಯುವರು. ತುದಿ ಬಾಳೆಯೆಲೆಯಲ್ಲಿ ಅಕ್ಕಿಕಾಯಿ ಹೂಗಳನ್ನಿಟ್ಟು ಮಡುವಿನ ನೀರಿನಲ್ಲಿ ತೇಲಬಿಟ್ಟರೆ ಅದು ಮಡುವಿಗೆ ಎರಡು ಬಾರಿ ಸುತ್ತಿ ಸುಳಿ ಸುಳಿಯಾಗಿ ನಡುಮಧ್ಯದಲ್ಲಿ ಕೆಳಗಿಳಿಯುವುದು. ಮಡುವಿನ ಮಧ್ಯಕ್ಕೆ ಕಲ್ಲೆಸೆದರೆ ಕೆಲವು ಬಾರಿ ಕಂಚಿಗೆ ಹೊಡೆದ ಶಬ್ಧ ಕೇಳಿ ಬರುವುದು. ದೇಗುಲದ ಮುಗುಳಿ ಬಹಳ ಎತ್ತರದವರೆಗೆ ಇದೆಯಂತೆ.

ಚಂದ್ರಮ್ಮನು ಕುಳಿತಲ್ಲಿಂದಲೇ ದಿಟ್ಟಗೆಟಕುವ ತನಕ ಕಣ್ಣರಚಿ ನೋಡಿದಳು ಉರಿಬಿಸಿಲಿನ ಝಳಕ್ಕಿಂತ ಕಾದಿತ್ತು ಆವಳು ಬಿಟ್ಟ ಬಿಸಿಯುಸಿರು. ಕಣ್ಣೆದುರಿನಲ್ಲಿ ಬಿಸಿಲ್ಗುದುರೆ ತಕ ಪಕನೆ ಕುಣಿಯುತಿತ್ತು ಇಬ್ಬದಿಗಳಲ್ಲಿ ಬೆಳೆದ ಹೆಗ್ಗಾಡಿನ ಮಧ್ಯ ಕಿರುದೆರೆಗಳನ್ನೆಬ್ಬಿಸುವ ಮಡುವು ಮಲೆನಾಡ ರಮಣಿಯ ಕಾಡಿಗೆ ಬಳಿದ ಕಣ್ಣಾಗಿತ್ತು. ಬೇಸಗೆಯಲ್ಲಿ ಣಗಿ ಉದುರಿಸಿದ್ದ ತರಗೆಲೆಗಳನ್ನು ಸುಂಟರಗಾಳಿ ಸುತ್ತಿ ಮೇಲಕ್ಕೆತ್ತುವ ಮಕ್ಕಳಾಟವಾಡುತಿತ್ತು. ನೀಲವರ್ಣದ ಮೀನ್‌ಚುಳ್ಳಿ ಹಕ್ಕಿಗಳು ಆಗೊಮ್ಮೆ ಈಗೊಮ್ಮೆ ಮಡುವಿನೊಳ ಭಾಗಕ್ಕೆ ಬಾಗಿದ ಮರಗಳ ಕೊಂಬೆಗಳಲ್ಲಡಗಿ ತಮ್ಮ ಬೇಟೆಯನ್ನು ಸಾಗಿಸುತಿದ್ದುವು. ಕಾಡು ಮಾವಿನ ಮರಗಳ ಕೊಂಬೆಗಳಲ್ಲಿ ಹಣ್ಣುಕಾಯಿಗಳಿಗಾಗಿ ಮಂಗ ಮುಸುವಗಳು ಹಾರಿ ರಂಪಾಟ ವೆಬ್ಬಿಸುತಿದ್ದುವು.

ಕಾಡು ಮಾವು—ಆದೂ ಹುಳಿ ಮಾವು ..................

ಆದರೂ ಆ ಮಾವುಗಳಿಗೆ ಒಂದು ರುಚಿಯಿದೆ. ಊರ ಮಕ್ಕಳು ಹಿರಿಯರು ಬೇಸಗೆಯ ಸಂಜೆ ಮುಂಜಾನೆ ಮಧ್ಯಾಹ್ನಗಳಲ್ಲಿ ಹಣ್ಣುಗಳಿಗಾಗಿ

ಬುಟ್ಟಿ ಹಿಡಿದು ಕಾವಲು ಕುಳಿತುಕೊಳ್ಳುತ್ತಾರೆ. ಚಂದ್ರಮ್ಮ-ಗುರಿಕಾರರತೂ ಎಳವೆಯಲ್ಲಿ ನೆರೆಮನೆಯ ಮಕ್ಕಳೊಂದಿಗೆ ಅಲ್ಲಿ ಗಾಳಿಗೆ ಬೀಸುವ ಹಣ್ಣು ಗಳನ್ನು ಸ್ಪರ್ಧೆಯಿಂದ ಹೆಕ್ಕಿದ್ದರು ''ಎನಗೊಂದು ಹುಳಿ ಮಾವು, ನಿನಗೊಂದು ಹುಳಿ ಮಾವು-ಭೂಮಿ ತಾಯಿಗೊಂದು ಹುಳಿ ಮಾವು—ಬೀಸಿ ಬಾ ಬೀರು ಗಾಳಿ''—ಎಂದು ಗಾಳಿಗೆ ಹರಕೆ ಹೊತ್ತು ಆಹ್ವಾನಿಸಿದ್ದರು. ಕೊಂಬೆಗಳಲ್ಲಿ ಜಿಗಿಯುತಿದ್ದ ಪುಟ್ಟಿಳಿಲುಗಳನ್ನು ಬೇಡಿದ್ದರು.

ಮುಂಬೆಳಕು—ಮುಸ್ಸಂಜೆ—ನಟ್ಟ ಹಗಲು. ದಿನದ ಈ ಹೊತ್ತು ಗಳಲ್ಲಿ. ಆದಿತ್ಯ ಮಂಗಳ ಈ ಕಡುವಾರಗಳಲ್ಲಿ-ಅಬ್ಬಿಯ ಮಡಿಲಿನ ಬಳಿ ಸುಳಿಯುವ ಜನರ ಸಂಖ್ಯೆ ಕಡಿಮೆ. ಹಿರಿಯರು ತಮ್ಮ ಮಕ್ಕ ಳನ್ನು ಈ ಹೊತ್ತುಗಳಲ್ಲಿ ಅಲ್ಲಿಗೆ ಹೋಗಬಿಡುವುದಿಲ್ಲ. ಅಲ್ಲಿಯ ಹುಳಿ ಮಾವುಗಳಿಗಾಗಿ ಮಡುವಿನಲ್ಲಿ ಸ್ನಾನಕ್ಕಾಗಿ ಅಲ್ಲಿಗೆ ದೆವ್ವಗಳ ಸವಾರಿ ಯಿರುವುದೆಂದು ಊರ ಕೆಲವರ ನಂಬಿಕೆ ಈಗಲೂ ಇದೆ. ರಾತ್ರಿಕಾಲ ಮಾವಿನ ಮರಗಳಡಿಗಳಲ್ಲಿ ಉರಿಯುವ ಹಿರಿದಾದ ಸೂಟಿಯ ಬೆಳಕನ್ನು ತಿಂಗಳ ಬೆಳಕಿನಲ್ಲಿ ಅವುಗಳ ನೀರಾಟವನ್ನು ಈಗಲೂ ಶ್ವಾಸವೆಳೆದುಕೊಂ ಡಿರುವ ಊರಿನ ಕೆಲಮಂದಿ ಮುದುಕರು ತಮ್ಮ ಎಳೆತನದಲ್ಲಿ ಕಂಡಿರು ವರಂತೆ.

ಚಂದ್ರಮ್ಮನು ಈ ಕತೆಗಳನ್ನು ಚಿಕ್ಕಂದಿನಲ್ಲೇ ಕೇಳಿ ತಿಳಿದಿರು ತ್ತಾಳೆ. ಮಡುವು ಊರಿಗೆ ಎಷ್ಟು ಪವಿತ್ರವೋ ಅಷ್ಟೇ ಭಯಂಕರ ವೂ ಆಗಿದೆ. ಇದರ ಮೇಲಿನ ನ್ಯೈಯೇ ದೋಣಿಕಡವು. ಸಾಧಾರ ಣದ ಅಂಬಿಗರು ಇಲ್ಲಿ ಹುಟ್ಟುಹಿಡಿಯಲು ಅಂಜುತ್ತಾರೆ. ದೋಣಿಯೆ ಲ್ಲಾದರೂ ಮಳೆಗಾಲದ ನೀರಿನ ಸೆಳೆತಕ್ಕೆ ಕೆಳಗಿಳಿದರೆ ಮತ್ತೆ ದಡ ಕಾಣುವ ಆಶೆಯೇ ಇರುವುದಿಲ್ಲ. ಬೇಸಗೆಯಲ್ಲಾದರೆ ಅಬ್ಬಿಯ ಮಡಿ ಲಲ್ಲೇ ತುಸು ಕೆಳಗೆ ಬಂಡೆಗೆ ಹಾರಿ ಆಚೆ ಬದಿಯ ಬಸ್ಸಿನ ಮಾರ್ಗವನ್ನು ಸೇರಬಹುದು.

ಯೋಚಿಸಬೇಕಾಗಿಲ್ಲ. ಮಗಳು ಸೋಮುವನ್ನು ಕರೆದು ಹೇಳಿದಳು.

"ನಿನ್ನ ಅಮ್ಮ ಬಂದಿದ್ದಾರೆ ನೋಡು-ಒಂದು ಸೇರು ಬೀಜ ಒಲೆಗೆ ಹಾಕು"

"ಬೇಡ ನಾಗು; ನನಗೇನು ಮನೆಯಲ್ಲಿ ಇಲ್ಲವೆ... ಬಂದ ಸರ್ತಿಯೆಲ್ಲಾ ಯಾಕೆ ಈ ಉಪಚಾರ"

ಚಂದ್ರಮ್ಮನೆಂದರೆ ಆಕೆ ಕೇಳಲಾರಳು. ನಾವಾದರೆ ಧನಿಯರ ಮನೆಗೆ ಹೋಗಿ ಉಂಡುತಿಂದು ಬರುತ್ತೇವೆ. ಅಂತೆ ಅವರಿಗೆ ತಮ್ಮಲ್ಲಿ ಬೆಂದೊಡವೆಗಳನ್ನು ತಿನ್ನಲು ಬರುವುದೇ? ಎಂದವಳ ಭಾವನೆ. ಚಂದ್ರಮ್ಮನಿಗೂ ನಾಗುವಿನ ಹೃದಯ ಗೊತ್ತು. ಆದುದರಿಂದ ನಾಗುವಿನ ಕೈಯಿಂದ ಏನಾದರೂ ಕೊಟ್ಟುದನ್ನು ತಿಂದು ಹೋಗುವ ಅಭ್ಯಾಸ ಅವಳಿಗೆ. ಆದರೆ ಇಂದವಳಿಗೆ ಏನೂ ಬೇಡವಾಗಿತ್ತು. ಆದುದರಿಂದ ಎಲೆ ಹರಿವಾಣದಲ್ಲಿ ಕೈಯಾಡಿಸುತ್ತಾ ಹೇಳಿದಳು

"ನನಗೆ ಯಾವುದೂ ಬೇಡವಾಗಿದೆ ನಾಗು...."

ಈ ಮಾತಿನಿಂದಲೇ ಅವಳ ಚಿರಪರಿಚಿತೆ ನಾಗುವಿಗೆ ಅವಳ ಹೃದಯದಳಲೆಲ್ಲಾ ಅರಿವಾಗದಿರಲಿಲ್ಲ. ಅವರಿಬ್ಬರಲ್ಲಿ ಈ ವಿಷಯ ಇಂದೇನೂ ಹೊಸತಾಗಿರಲಿಲ್ಲ; ಈ ಕುರಿತು ಎಷ್ಟೋ ದಿನಗಳಿಂದೀಚೆಗೆ ಅವರು ಗಂಟೆ ಗಂಟೆಗಳ ಕಾಲ ಯೋಚಿಸಿ ಚಿಂತಿಸಿದ್ದರು. ಇಂದೂ ಅದೇ ಹಾಡು....

"ಸಣ್ಣಯ್ಯನವರ ಮದುವೆಗೆ ಇನ್ನೆಷ್ಟು ದಿನ ಚಂದ್ರಕ್ಕ"

"ಇಂದು ಕೂಡಿದರೆ ಹದಿನೈದೇ ದಿನವಿದೆ ನಾಗು"

"ಯಾಕೆ ಬೇಕು ಈ ಮದುವೆ. ದೊಡ್ಡಮ್ಮನೋರಿಗೆ ಹುಚ್ಚು ಹಿಡಿದಿದೆಯಂದ್ರೆ"

"ಹುಚ್ಚಲ್ಲ ನಾಗು, ಮನೆಗೊಬ್ಬಳು ಹೊಸ ಸೊಸೆ ಬಂದರೆ ಯಾರಿಗೆ ಬೇಡ ಹೇಳು?

"ಈಗ ಒಬ್ಬಳು—ಮುಂದೆ ಇಬ್ಬರನ್ನಾಳುವ ಆಸೆ ಅವರಿಗೆ"

"ಎಂಥಾ ಸೊಸೆ ಬರ್ತಾಳೊ? ಆ ಪುರೋಹಿತಯ್ಯನ ಅಕ್ಕನ ಮಗಳಂತಲ್ಲ! ಸಣ್ಣ ಪ್ರಾಯದ ಹುಡುಗೀಂತ ಎಲ್ಲಾ ಸುದ್ದಿ ಹಾರಿಸ್ತಾರೆ"

“ನಿಜ ನಾಗು! ಆ ಹುಡುಗಿಗೇನು ಗೊತ್ತು; ಪಾಪ! ಅವಳಿಗಿದು ಮೊದಲ ಸಂಬಂಧವೆಂದೇ ತಿಳಿದಿರಬಹುದು. ಆ ಪುರೋಹಿತರೇನು ಸಾಮಾನ್ಯ ರಲ್ಲ–ಮಹಾ ಚಾಣಕ್ಯ”

“ಏನೋ ನನಗೊಂದೂ ಅರ್ಥವಾಗೋದಿಲ್ಲ! ಎಂಥಾ ಸೊಸೆ ಬರ್‍ತಾಳೋ?”

“ಎಂಥವಳೇ ಬರಲಿ ನಾಗೂ, ಒಟ್ಟಾಗಿ ಒಳ್ಳೆಯವಳಿರಲಿ. ಅದೇ ನನ್ನ ಬಯಕೆ; ಅವರಿಗಾದರೂ ಸುಖ ದೊರೆಯಲಿ”

ಚಂದ್ರಮ್ಮ ಕಣ್ಣಿನಲ್ಲಿ ಕಟ್ಟಿ ನಿಲ್ಲಿಸಿದ್ದ ಕಣ್ಣೀರು ತಟಕು ತಟಕಾಗಿ ಹರಿಯಹತ್ತಿತು. ಸೆರಗಿನಲ್ಲದನ್ನು ಒರಸಿಕೊಂಡು ಮತ್ತೂ ಹೇಳಿದಳು

“ನಾನಲ್ಲವೇ ನಾಗೂ ಪಾಪಿಷ್ಠೆ....”

ನಾಗುವಿದಕ್ಕೇನೂ ಹೇಳಲಾರಳು. ದುಃಖದಲ್ಲಿ ಸಹಭಾಗಿಯಾಗಿ ಸುಮ್ಮನಾದಳು. ಅಂತಿರದೆ ಮತ್ತೂ ಕೇಳಿದಳು

“ಮನೆಯಿಂದ ಯಾರಾದರೂ ಬಂದರೇ ಚಂದ್ರಕ್ಕ”

“ಇಲ್ಲ ನಾಗು....ಸದ್ಯ ಬಂದಿಲ್ಲ. ಮೊನ್ನೆ ಅಣ್ಣ ಬಂದು ಹೋದುದು ನಿನಗೆ ಗೊತ್ತಿದೆ. ಅಲ್ಲಿಂದ ಬಂದರೂ ಯಾರು ಏನು ಮಾಡುವ್ರದಿದೆ. ಇವರು ಹಿಡಿದ ಹಗ್ಗದಲ್ಲೇ ನೇತಾಡುತಿದ್ದಾರೆ. ಮೊನ್ನೆ ಇವರು ಮನೆಗೆ ಹೋಗಿ ದ್ದಾಗ ಅಪ್ಪ ಅಮ್ಮ ತುಂಬಾ ರೀತಿಯಲ್ಲಿ ಹೇಳಿದರಂತೆ....ಆದರೆ ಅತ್ತೆಯನ್ನು ಒಪ್ಪಿಸಲು ಯಾರಿಗೆ ಸಾಧ್ಯ ನಾಗು....ಅದಾಗದಿದ್ದರೆ ಏನು ಫಲ....”

“ನಿಮಗೆ ಏನಾದರೂ ಹೇಳಿ ಕಳಿಸಿಲ್ವೆ”

“ಅಣ್ಣನೇ ಹೇಳಿದ. ಅಮ್ಮ ಅಪ್ಪ ಹೇಳಿರುವರಂತೆ....ನಿನ್ನ ಮನ ಬಂದಂತೆ ಮಾಡು... ಬಾ–ಅಂತ ನಾವು ಕರೆಯುವುದಕ್ಕಾಗುವುದಿಲ್ಲ. ಅಲ್ಲೇ ನಿಲ್ಲೂಂತ ಒತ್ತಾಯಿಸುವುದೂ ಇಲ್ಲ. ಅಲ್ಲಿರಲು ಒಪ್ಪಿಗೆಯಾಗದಿದ್ದರೆ ಬಾ. ನೀನೇನೂ ನಮಗೆ ಹೆಚ್ಚಲ್ಲ. ನಮಗೆ ನೀನೊಬ್ಬಳೇ ಮಗಳು” ಎಂತ

ಚಂದ್ರಮ್ಮ ತವರಿಗೆ ಹೋಗುವ ವಿಷಯದಲ್ಲಿ ನಾಗುವಿಗಾದ ಬೇಸರ ಅಷ್ಟಿಷ್ಟಲ್ಲ. ಅವಳು ಕಣ್ಣೀರು ತುಂಬಿ ಕೇಳಿದಳು—

"ಹಾಗಾದರೆ ಏನು ಮಾಡ್ತೀರಿ ಚಂದ್ರಕ್ಕ"

"ನಾನು ಏನು ಮಾಡಲಿ ನಾಗು....ನಾನಿಲ್ಲಿ ಹೇಗೆ ನಿಲ್ಲಲಿ. ನೀನೇ ಹೇಳು"

ಈ ವಿಷಯದಲ್ಲಿ ಸಂತೈಸಿ ಒತ್ತಾಯಿಸಿ ನಿಲ್ಲಿಸುವ ಶಕ್ತಿ ನಾಗುವಿನದಲ್ಲ ಎಂತಾದರೂ ಚಂದ್ರಕ್ಕನ ಬಾಳು ಕಷ್ಟ. ಹೊಸಬಳೆಂತವಳೋ... ....ಎಂದು ಮನಸ್ಸಿನಲ್ಲೆ ಉರುಹಾಕಿದ ನಾಗುವಿನ ಸಂಭಾಷಣೆ ಮೌನದಲ್ಲೇ ಕೊನೆಗೊಂಡಿತು.

ಸೋಮು ಬೀಜದ ಬೆಂಡು ತಯಾರಿಸಿ ಓಲೆಬುಟ್ಟಿಯಲ್ಲಿ ಚಂದ್ರಮ್ಮನ ಮುಂದಿಟ್ಟಳು. ಎಂಟು ವರುಷದ ಹುಡುಗಿಯೊಡನೆ ಚಂದ್ರಮ್ಮ ನಗುತಂದು ಹೇಳಿದಳು "ಇನ್ನು ನನಗೆ ಬೀಜದ ಬೆಂಡು ಕೊಡಬೇಡ ಸೋಮು. ಇನ್ನು ನಿನ್ನ ಮದುವೆಗೆ ಹೇಳಿದರೆ ಮಾತ್ರ ನಿನ್ನಲ್ಲಿಗೆ ಬರ್ತೇನೆ"

ಸೋಮು ನಾಚಿ ತಾಯಿಯ ಅಡ್ಡಾದಳು. ಚಂದ್ರಮ್ಮ ತಮ್ಮಲ್ಲಿ ಇದು ಕಡೆಯ ಬಾರಿ ಗೇರುಬೀಜವನ್ನು ತಿನ್ನುವುದೆಂಬ, ಚಂದ್ರಮ್ಮನಿಂದಲೇ ಬಂದ ಮಾತಿನ ಒಂದು ವಿಧದ ಅರ್ಥವು ಹಿರಿಯ ನಾಗುವಿಗೆ ಅರಿವಾಗದಿರಲಿಲ್ಲ. ಅವಳು ಮೆಲ್ಲನುಸುರಿದಳು

"ಏನೋ ಚಂದ್ರಕ್ಕ....ಎಂಥ ಮದುವೆಯೋ...."

"ಇಲ್ಲ ನಾಗು ಎಲ್ಲಿದ್ದರೂ ಸರಿಯೆ. ಸುದ್ದಿಸಿಕ್ಕಿದರೆ ಸಾಕು. ಸೋಮುವಿನ ಮದುವೆಗೆ ಬಂದೇ ಬರುತ್ತೇನೆ"

ನಗೆಯಾಡಿದಳು ಚಂದ್ರಮ್ಮ. ಇದೊಂದು ಬಾರಿ ಕೆಲವು ಸಮಯದಿಂದೀಚೆ ಬಾಕಿಯುಳಿದಿರುವುದನ್ನು ಮೆಲುಕು ಹಾಕಿದಳೆಂಬಂತೆ. ಆದರೆ ಮೊದಲಿನ ನಗುವೇ ಅದಾಗಿರಲಿಲ್ಲ. ನಗುವಿನ ಹಿಂದೆ ದುಃಖದ ಛಾಯೆಯು ಹೊರಹೊಮ್ಮಿ ಅವಳ ಮುಖವನ್ನು ಕಪ್ಪಿಟ್ಟಿತು. ಮಕ್ಕಳಿಲ್ಲದ ಹೆಣ್ಣ ಬಾಳ್ವೆಯೇ ಇಂತೆಂದು ಎರಡು ಹೆಂಗರುಳುಗಳೂ ಕೆಲಹೊತ್ತು ಮೌನ ದುಃಖವನ್ನನುಭವಿಸಿದುವು. ಕ್ಷಣಹೊತ್ತು ಕಳೆದ ಬಳಿಕ ನಾಗು ಏನೋ ನೆನಸಿಕೊಂಡವಳಂತೆ ಕೇಳಿದಳು

"ಚಂದ್ರಕ್ಕ....ನೀವು ಈ ತಿಂಗ್ಳಲ್ಲಿ ಮಿಂದಿಲ್ಲ ಅಂತ ಕಾಣ್ತದೆ"

ಚಂದ್ರಮ್ಮನಿದಕ್ಕೆ ಮುಗುಳುನಗೆಯಲ್ಲೆ ಹೂಂಗುಟ್ಟಿ ಉತ್ತರಿಸಿದಳು. ತನ್ನ ಚಿರಪರಿಚಿತಳಲ್ಲಿ ನಾಗುವಿಗೊಂದು ಹೊಸ ಅನುಭವವಾಯಿತು. ಚಂದ್ರಮ್ಮನಿಗೆ ಮುಟ್ಟು ಕಟ್ಟಿದೆಯೆಂದು.

ಬುಟ್ಟಿಯ ಬೀಜದ ಬೆಂಡುಗಳೆಲ್ಲಾ ಮುಗಿಸಲು ಸ್ವಲ್ಪ ಬೆಳ್ಳಿಗೂ ಹಾಕಿ ಚಂದ್ರಮ್ಮ ಸಂಜೆಯಾಯಿತೆಂದು ಮನೆಗೆ ಹೊಂಟಳು. ನಾಗು ಅಂಗಳಕ್ಕಿಳಿದು ತೋಟದ ವರೆಗೆ ಬಂದು ಒಡತಿಯನ್ನು ಬೀಳ್ಕೊಟ್ಟಳು.

ಚಂದ್ರಮ್ಮನು ಮನೆಗೆ ತಲಪುವಾಗ ಅವಳ ಗೋಪಿ ದನ ಹಟ್ಟಿಬಾಗಿಲಲ್ಲಿ ಬಂದು ನಿಂತಿತ್ತು. ಅದು ಅವಳಿಗೆ ಮದುವೆಯಾದ ವರುಷ ತವರಿನಿಂದ ಕಳುಹಿಕೊಟ್ಟ ದನ. ಎರಡು ಕರು ಹಾಕಿತ್ತು. ತನ್ನ ಮೊಲೆ ಮರೆತ ಕರುವನ್ನು ಬಳಿಯಲ್ಲಿ ನಿಲ್ಲಿಸಿಕೊಂಡು ಅದರ ಮೈ ನೆಕ್ಕುತಿತ್ತು. ಚಂದ್ರಮ್ಮನಿಗೆ ಈ ದೃಶ್ಯವನ್ನು ನೋಡಿ ಎದೆಯಲ್ಲೇನೋ ವೇದನೆಯಾಯಿತು. ಒಡನೆಯೇ ಗೋಪಿಯ ಬಳಿಗೆ ಹೋಗಿ

"ನೀನೇ ಭಾಗ್ಯವಂತೆ ಗೋಪಿ ... ನೀನೇ ನೆಕ್ಕುತ್ತಿರು ಕರುವನ್ನು.... ನೀನೇ ಮೊಲೆಯೂಡಿಸು ಕರುವಿಗೆ."

ಎಂದು ತನ್ನನ್ನೇ ಮರೆತು ತಲೆಬಾಗಿಸಿದ ಅದನ್ನು ತುರಿಸಿದಳು. ಹಾಲುಣ್ಣಲು ತವಕಿಸುತ್ತಿದ್ದ ಕಟ್ಟಿಹಾಕಿದ್ದ ಅದರ ಕರುವನ್ನು ಬಿಟ್ಟು ಒಳ ನಡೆದಳು.

o o o o o o

ಗುರಿಕಾರರ ಮದುವೆಗೆ ಇನ್ನು ಎರಡು ದಿನ ಮಾತ್ರ ಉಳಿದಿತ್ತು. ಮದುವೆಯು ಮೊದಲಬಾರಿಯಂತೆ ಈ ಬಾರಿಯೂ ವಿಜೃಂಭಣೆಯಲ್ಲಾಗಬೇಕೆಂದು ತಾಯಿಯ ಮತ. ಚಿಕ್ಕ ನಮೂನೆಯಲ್ಲಿ ಸುಧಾರಿಸಬೇಕೆಂದು ಮಗನ ಮನಸ್ಸು. ಕಡೆಗೆ ಸಾಧಾರಣದ ಕ್ರಮದಲ್ಲಿ ಮದುವೆಯು ಏರ್ಪಾಡಾಗುತಿತ್ತು. ಎಷ್ಟು ಸಾಧಾರಣವೆಂದರೂ ಗುರಿಕಾರರ ಮನೆಯ ಮದುವೆಯಲ್ಲವೇ? ಅಂಗಳವಿಡೀ ಚಪ್ಪರ ಬಿದ್ದಿತ್ತು. ಊರವರೆಲ್ಲಾ ಒಂದೆರಡು ದಿನ ಮುಂದಾಗಿ ಬಂದು ಕೆಲಸಗಳಲ್ಲಿ ಸಹಕರಿಸುತಿದ್ದರು. ಕೆಲಸದ ಒಕ್ಕಲು ಮಕ್ಕಳಿಗೆಲ್ಲಾ ಈಗ ವಿರಾಮವೇ ಇರಲಿಲ್ಲ. ಧನಿಯರ ಮನೆಯ ಔತಣವೆಂದರೆ ಹಗಲು

ರಾತ್ರಿ ದುಡಿಯುತ್ತಾರೆ. ಎಷ್ಟು ಸಂಭ್ರಮವೋ ಅಷ್ಟು ಸಂತಸ ಅವರಿಗೆ. ಊರಿಂದ ಹೊರೆಹೊರೆಯಾಗಿ ತರಕಾರಿಗಳು ಬರಹತ್ತಿದುವು. ಈಗ ದಿನಂ ಪ್ರತಿಯೂ ಇಪ್ಪತ್ತು ಮೂವತ್ತು ಮಂದಿ ಕೆಲಸದಾಳುಗಳಿಗೆ ಮನೆಯಲ್ಲೇ ಊಟಮಾಡಿ ಹಾಕಬೇಕು. ಈ ಕೆಲಸದಲ್ಲಿ ಚಂದ್ರಮ್ಮ ಅರ್ಧ ಕಂಗಾಲಾಗಿದ್ದಳು. ಈಗ ಅವಳಿಗೆ ಬೇಸರದಿಂದ ಯೋಚಿಸುವುದಕ್ಕೂ ವಿರಾಮವಿರಲಿಲ್ಲ. ಆದರೆ ತವರಿಗೆ ಹೋಗುವುದೇ ಸರಿಯೆಂದು ಆಕೆ ನಿಶ್ಚಯಿಸಿದ್ದಳು.

ಮದುವೆಯ ದಿನ – ಗುರಿಕಾರರು ಎರಡನೆ ಬಾರಿ ಮದುಮಗನಾಗಿ ಸಿಂಗರಗೊಂಡಿದ್ದರು. ಪುರೋಹಿತರೇ ಪೌರೋಹಿತ್ಯ ವಹಿಸಿದ್ದರು. ಹೆಣ್ಣಿನ ಕಡೆಯವರೂ ಅವರೇ ಆದಕಾರಣ ಎಲ್ಲವನ್ನೂ ಸುಲಭದಲ್ಲಿ ತಿರಿಸುವೆನೆಂದು ಕಾವೇರಮ್ಮನಿಗೆ ಮಾತುಕೊಟ್ಟಿದ್ದರು. ಅಂದು ಮದುವೆಗೆ ಬಂದು ಸೇರಿದ್ದ ನೆಂಟರಿಷ್ಟರಲ್ಲಿ ಊರವರಲ್ಲಿ ಚಂದ್ರಮ್ಮ ನಗುಮೊಗದಲ್ಲೆ ಆಡಿ ನಡೆದುಕೊಳ್ಳು ತಿದ್ದಳು. ಬಲು ಉತ್ಸಾಹದಲ್ಲಿರುವವಳಂತೆ ಎಲ್ಲಾ ಕಡೆಗೆ ಓಡ್ಯಾಡಿ ಕೆಲಸ ಮಾಡಿಬಂದವರನ್ನು ಉಪಚರಿಸುತಿದ್ದಳು. ಅವಳ ತವರಿಂದ ಯಾರೂ ಮದು ವೆಗೆ ಬಂದಿರಲಿಲ್ಲ ಅಲ್ಲಿಂದ ಬರುವುದೂ ಅವಳಿಗೆ ಬೇಡವಾಗಿತ್ತು.

ದಿಬ್ಬಣಹೊರಡುವ ಮುಂಚೆ ಪುರೋಹಿತರು ನಿಯಮದಂತೆ ಚಂದ್ರಮ್ಮ ನನ್ನು ಕರೆದು ಗಂಡನಿಗೆ ಮಂಗಲ ಬಾಸಿಗವನ್ನು ಕಟ್ಟಲು ಅಪ್ಪಣೆಯಿತ್ತರು. ಮರುಮದುವೆಯಲ್ಲಿ ವರನಿಗೆ ಮದುವೆಯಾದ ಮೊದಲನೆ ಹೆಂಡತಿಯಿದ್ದರೆ ಅವಳೇ ಅದನ್ನು ಕಟ್ಟಬೇಕಂತೆ. ಪುರೋಹಿತರ ಉತ್ಸಾಹದ ಅಟ್ಟಹಾಸ ದನಿ ಯನ್ನು ಚಂದ್ರಮ್ಮನಿಗೆ ಸಹಿಸಲಾಗಲಿಲ್ಲ. ಒಮ್ಮೆಗೇ ತಡೆದುಕೊಂಡು ನಗು ಮೊಗವನ್ನೆ ತಂದುಕೊಂಡಳು.

ಮಂಗಲವಾದ್ಯಗಳು ಮೊಳಗುತಿದ್ದುವು ದೂರದಿಂದ ಅಬ್ಬಿಯು ಧೋ... ಎಂದು ಮೊರೆಯುತಿತ್ತು. ಗುರಿಕಾರರು ಕೆಳಮುಖ ಮಾಡಿ ಕುಳಿತಿದ್ದರು. ಗಂಡನ ಬಳಿಗೆ ಹೋದ ಚಂದ್ರಮ್ಮನಿಗೆ ಕಳೆದ ನಾಲ್ಕು ವರುಷ ಗಳ ಹಿಂದೆ ನಡೆದ ತಮ್ಮ ಮದುವೆಯ ಚಿತ್ರ ಕಣ್ಣಿಗೆ ಕಟ್ಟಿದಂತಾಯಿತು. ಅಂದು ಅದೇ ಸಿಂಗಾರದಲ್ಲಿ ಗುರಿಕಾರರು ಕಳಿತಿದ್ದರು. ಇದನ್ನು ನೋಡಿದ ಚಂದ್ರಮ್ಮ ತಾನೂ ಒಮ್ಮೆಗೆ ಮದುಮಗಳಂತಾದಳು. ವಾದ್ಯಗಳ ಮೊಳಗು ಹುಚ್ಚೆಬ್ಬಿಸಲು ತನ್ನ ಸುಖದುಃಖವನ್ನು ಒಂದು ಕ್ಷಣ ಮರೆತ ಅವಳು

ಮಂತ್ರವನ್ನುಚ್ಚರಿಸುತ್ತಾ ಪುರೋಹಿತರು ಕೊಟ್ಟ ಮಂಗಲ ಬಾಸಿಗ ಮಣಿಯನ್ನು ಕಟ್ಟಿ ಪತಿಯ ಹಣೆಗೆ ಚಂದ್ರಮ್ಮ ತಿಲಕವನ್ನಿಟ್ಟಳು. ಮುಗಿಸಿ ನಿಂತ ಆಕೆಯ ಕಣ್ಣಿನಿಂದ ಒಂದೆರಡು ತಟಕು ನೀರುರುಳಿದುದು ಗುರಿಕಾರರಿಗೆ ಮಾತ್ರ ಅರಿವಾಯಿತು, ಉಳಿದ ಮಂದಿ ಉತ್ಸಾಹದಲ್ಲಿ ಮೈಮರೆತಿದ್ದರು.

ಊಟ ತೀರಿಸಿ ದಿಬ್ಬಣ ಹೊರಡಲನುವಾಯಿತು. ಚಂದ್ರಮ್ಮನೂ ತಾನೂ ದಿಬ್ಬಣದೊಡನೆ ಸಹಭಾಗಿಣಿಯಾಗಿ ಮನೆಯ ಮುಂದಿನ ಬಾಗಿಲ ವರೆಗೆ ಬಂದು ನಿಂತಳು ಮತ್ತೊಮ್ಮೆ ವಾದ್ಯಗಳ ಘೋಷಣೆ ಆಕಾಶಕ್ಕೇರಿತು. ಗುರಿಕಾರರು ಮನೆಮೆಟ್ಟಲು ಇಳಿಯುವುದರಲ್ಲಿದ್ದರು. ಹೋಗಿ ಬರುವೆನೆಂಬ ಕಣ್ಸನ್ನೆಯ ಸೂಚನೆಯಲ್ಲಿ ಗುರಿಕಾರರು ಪತ್ನಿಯ ಕಡೆಗೆ ನೋಡಿದರೆ ಚಂದ್ರಮ್ಮನೂ ಪತಿಯ ಕಡೆಗೆ ಕಣ್ಣಾಡಿಸಿದಳು. ಕಾವೇರಮ್ಮನು ಮಾತ್ರ ಮುಂದಾಳಾಗಿ ಚಿಕ್ಕ ಸೊಸೆಯನ್ನು ತರಲು ಅಂಗಳಕ್ಕೆ ಈ ಮೊದಲೇ ಇಳಿದಿದ್ದರು.

ಮನೆಯಿಳಿದು ಅಂಗಳದ ವರೆಗೂ....ಮುಂದೆ ಕಣ್ಮರೆಯಾಗುವ ವರೆಗೂ ಚಂದ್ರಮ್ಮ ಕಲ್ಲಿನ ಪ್ರತಿಮೆಯಂತೆ ನಿಂತು ದಿಬ್ಬಣವನ್ನು ನೋಡುತಿದ್ದಳು. ಮತ್ತವಳಿಗೆ ಅಲ್ಲಿ ನಿಲ್ಲಲಾಗಲಿಲ್ಲ. ಒಳಬಂದು ಆ ದಿನವಿಡೀ ಉಪವಾಸವಿದ್ದ ಬೆಳ್ಳಿ ನಾಯಿಗೆ ಎಲೆತುಂಬಾ ಅನ್ನವಿಟ್ಟಳು. ಹಟ್ಟಿಯಿಂದ ಕರೆಯುವ ಗೋಪಿಯ ಕರುವಿಗೆ ಹುಲ್ಲು ಹಾಕಿ ಬಾಯಾರಿಕೆಯಿಟ್ಟಳು. ತಿರುಗೊಮ್ಮೆ ಒಳಮನೆಗೆ ನುಗ್ಗಿ ದೇವರ ದೀಪ ದೊಡ್ಡದು ಮಾಡಿ ದೇವರೆದುರು ಅಡ್ಡ ಬಿದ್ದು ಉಟ್ಟ ಉಡುಗೆಯಲ್ಲೇ ಪಡುಬಾಗಿಲಲ್ಲಿ ಯಾರ ಲಕ್ಷ್ಯಕ್ಕೂ ಬಾರದಂತೆ ಹೊರಬಿದ್ದಳು

ದಿಬ್ಬಣವಿನ್ನೂ ದೂರ ಹೋಗಿರಲಿಲ್ಲ. ವಾದ್ಯ ವಾದನಗಳ ಸ್ವರ ಸಮ್ಮೇಲನಗಳಲ್ಲಿ ಸಿಡಿಮದ್ದುಗಳ 'ಗುಡುಂ' ಗುರಿಕಾರರನ್ನೆಲ್ಲಿಗೋ ಸೆರೆಹಿಡಿದು ಕೊಂಡು ಹೋಗುತ್ತಿದೆ ಎಂಬ ಅನುಭವವಾಗುತ್ತಿರುವ ಚಂದ್ರಮ್ಮ ಅದೇ ಶಕ್ತಿಯಿಂದ ಹೆಜ್ಜೆ ಹಾಕುತಿದ್ದಳು. ಚಂದ್ರಮ್ಮ ತವರಿಗೆ ಹೊರಟಿದ್ದಳು.

ತಾನು ಬರುವೆನೆಂದು ತವರಿಗೆ ಹೇಳಿಕಳುಹಿಸಿರಲಿಲ್ಲ. ಅಲ್ಲಿಂದ ಕರೆದೊಯ್ಯಲು ಯಾರೂ ಬಂದಿರಲಿಲ್ಲ. ಯಾರೂ ಜತೆಗಿಲ್ಲದಿದ್ದರೂ ಎಂಟು-ಹತ್ತು ಮೈಲು ದೂರದ ಸಂಪಾಜೆಗೆ ತಾನೊಬ್ಬಳೇ ಹೋಗಬಲ್ಲೆನೆಂಬ ಧೈರ್ಯವೊಂದು ಅವಳಿಗೆ ಈ ಸಮಯದಲ್ಲಿ ಬಂದಿತ್ತು. ನಾಗುವಿನ ಮನೆ

ಯಂಗಳದಲ್ಲೇ ದಾಟಿ ಹೋಗಬೇಕಿತ್ತವಳು. ನಾಗು ಸಹಾ ತನ್ನ ಮನೆಯಿ ಳಿದು ಅಂಗಳದಲ್ಲಿ ಗುರಿಕಾರರ ದಿಬ್ಬಣವನ್ನು ನೋಡುತ್ತಿದ್ದಳು.

"ನಾಗೂ ... ಮನೆಗೆ ಹೋಗುತ್ತೇನೆ"

ಚಂಪ್ರಮ್ಮ ಹೇಳುತ್ತಾ ಮುಂದಾದಳೇ ಹೊರತು, ಆವಳ ಹಿಂದೆಯೇ ಅಂಗಳದ ತುದಿಯ ತನಕ ಹೋದ ನಾಗುವನ್ನು ತಿರುಗಿಕೂಡಾ ನೋಡುವ ಸಹನೆ ಅವಳಿಗಿರಲಿಲ್ಲ. ದುಃಖದ ಆ ವೇಗವು ಅವಳನ್ನು ಮುಂದೂಡುತಿತ್ತು. ನಾಗು ಯೋಚಿಸಿದಳು — ಜತೆಗೆ ಯಾರು ಇಲ್ಲವೆಂದು ತಿಳಿದ ನಾಗು ತನ್ನ ಮಗಳು ಸೋಮುವನ್ನು ಒಡತಿಯ ಸಂಗಡಕ್ಕಾಗಿ ಹಿಂದೆಯೇ ಕಳುಹಿಸಿದಳು.

o o o o o o

ಮದುವೆ ಕಳೆದು ಒಂದೆರಡು ತಿಂಗಳುಗಳಾಗಿವೆ. ಗುರಿಕಾರರ ಮನೆ ಯಲ್ಲಿ ಅತ್ತೆಯ ಪ್ರೇಮಪಾತ್ರಳಾದ ಚಿಕ್ಕ ಸೊಸೆಯು ನಲಿದಾಡುತಿದ್ದಾಳೆ. ಗುರಿಕಾರರ ಎರಡನೆಯ ಪತ್ನಿಯ ಹೆಸರು ಸರಸ್ವತಿ ಮನೆಯ ಮಾತಿನ ಸರಸು! ಸರಸುವಿಗೆ ಈಗ ಹದಿನಾಲ್ಕು ವರ್ಷ ಕಾವೇರಮ್ಮನು ಹೇಳುವಂತೆ ಚಂದ್ರಮ್ಮನಿಗಿಂತ ತುಸು ಓದಿದವಳು. ಬದಿಯಡ್ಕ ಹ್ಯಾಸ್ಕೂಲಿನಿಂದಲೇ ಶಾಲೆಗೆ ಹೋಗುತಿದ್ದ ಹುಡುಗಿಯನ್ನು ಶಾಲೆ ಬಿಡಿಸಿ ಗುರಿಕಾರರ ಕೈಹಿಡಿಸಿ ದ್ದರು ಪುರೋಹಿತರು. ಪಡಲಾಗಿಂದ ಬಂದ ಈ ಹೊಸ ಹುಡುಗಿ ಈ ಮೂಡಣ ಊರಿಗೆ ಒಂದು ಹೊಸ ರೂಪವನ್ನೇ ತಂದಿದ್ದಳೆನ್ನಲಡ್ಡಿಯಿರಲಿಲ್ಲ. ನಿತ್ಯ ಎರಡು ಜಡೆ ಬಿಡುತಿದ್ದ ಸರಸು ಈಗೀಗ ಅತ್ತೆಯ ಒತ್ತಾಯಕ್ಕೆಂಬಂತೆ ಅದನ್ನೇ ಸುರುಳಿ ಮಾಡಿ ಮುಡಿ ಕಟ್ಟುತ್ತಾಳೆ. ಕಿವಿಯಲ್ಲಿನ 'ಲಾಲಾಕು' ತೂಗುತ್ತಿರುವುದನ್ನು ತೆಗೆಯೆಂದರೆ ಸೊಸೆಗೇನಾದರೂ ಬೇಸರವಾಗಬಹು ದೆಂದು ಕಾವೇರಮ್ಮ ಬಾಯಿಗೆ ಬೀಗ ಹಾಕಿ ಬಂದವರೊಡನೆ ಸಣ್ಣ ಹುಡುಗಿ ಯಲ್ಲವೇ ಎನ್ನುತಿದ್ದಾರೆ. ಸರಸು ಗುರಿಕಾರರ ಮನೆ ಹತ್ತಿದಂದಿನಿಂದ ಊರ ಕೆಲವಂದಿ ಹೆಮ್ಮಕ್ಕಳಾದರೂ ಸರಸುವಂತೆ ಸಿಂಗರಿಸಿಕೊಳ್ಳಲು ಯತ್ನಿಸದಿರ ಲಿಲ್ಲ. ಎಂತಿದ್ದರೂ ಊರಿಗವಳು ಹೊಸ ಚೈತನ್ಯವೆಂಬಂತೆ ಮೊಗದೋರಿಸಿ ದಳು. ಆದರ ಗುರಿಕಾರರ ಮನಸ್ಸಿನಲ್ಲಿ ಹೊಸ ಚೇತನ ಮೂಡಿರಲಿಲ್ಲ. ಅವರು ಸಂಪಾಜೆಗೆ ಹೋಗಿರಲೂ ಇಲ್ಲ. ಅಲ್ಲಿಂದ ಯಾರೂ ಬರುತ್ತಿರಲಿಲ್ಲ. ಮಗನು ಮಂಕುಬಡಿದವನಂತೆ ಕುಳಿತಿದ್ದರೆ ಕಾವೇರಮ್ಮ ಹೇಳುತಿದ್ದರು.

"ಸೊಕ್ಕು! ಚಂದ್ರು ತನ್ನಷ್ಟಕ್ಕೆ ಬರ್ತಾಳೆ ಮಾಣಿ. ನಿನಗ್ಯಾಕೆ ಆ ಚಿಂತೆ"—ಎಂದು ಈ ವಿಷಯ ಸರಸುವಿಗೆ ತಿಳಿಯದಂತೆ ಜಾಗ್ರತೆ ವಹಿಸಿದ್ದರು. ಇದು ಕ್ರಮೇಣ ಸರಸುವಿಗೆ ಗೊತ್ತಾಗದುಳಿಯದು. ಆದರೆ ಹೊಸತಾಗಿ ಬಂದ ಹುಡುಗಿಗೆ ಅವಳ ಅಕ್ಕನ ಕುರಿತು ಕೂಡಲೇ ತಿಳಿಸುವುದು ಬೇಡವೆಂದು ಹೇಳುತ್ತಿರಲಿಲ್ಲ.

ಸರಸು ಗುಣ ರೂಪಗಳಲ್ಲಿ ಚಂದ್ರಮ್ಮನನ್ನು ಸರಿಗಟ್ಟುವವಳಲ್ಲದಿದ್ದರೂ ತೊಂದರೆಯುವಳಲ್ಲ. ಅತ್ತೆ ಗಂಡನೆದುರಲ್ಲಿ ಚೆನ್ನಾಗಿ ನಡೆದುಕೊಳ್ಳುವಳು. ಆದರೆ ಸರಸುವಿನದು ಸಣ್ಣ ಪ್ರಾಯ. ಅದಕ್ಕೆ ತಕ್ಕ ಮಕ್ಕಳಾಟಿಕೆ ಇನ್ನೂ ಮಾಸಿರಲಿಲ್ಲ! ಮನೆಯ ಕೆಲಸ ಮಾಡಿ ಅನುಭವವಿಲ್ಲ. ಶಾಲೆಯ ಪಾಠಗಳಲ್ಲಿ ಮೊದಲಿಗಳಾಗಿರುತಿದ್ದ ಸರಸು ತನ್ನ ಎಲ್ಲಾ ಕೆಲ್ಸಗಳ ಭಾರವನ್ನು ಅತ್ತೆಯ ಮೇಲೆಯೇ ಹೊರಿಸಿ ಗಂಡನೆದುರು ಚಕ್ಕಂದ ಹೊಡೆದು ಕುಳಿತುಕೊಳ್ಳುವಳು. ಗುರಿಕಾರರು ಇಲ್ಲದ ಮನಸ್ಸಿನಿಂದ ಕಿರಿಯ ಮಡದಿಯ ಮಾತುಗಳಿಗೆ 'ಹೂಂ' ಗುಟ್ಟುವರು. ಗಂಡನ ಈ ಉದಾಸೀನದ ಸಮಸ್ಯೆ ಕೆಲಕಾಲ ಸರಸುವಿಗೆ ತಿಳಿಯದಿದ್ದರೂ ಒಂದು ದಿನ ತನಗೊಬ್ಬಳು ಅಕ್ಕನಿರುವಳೆಂಬ ಅರಿವಾಯಿತು. ಅದೂ ಸ್ಪಷ್ಟವಾಗಿ ತಿಳಿದುಬಂದುದು ಒಕ್ಕಲು ನಾಗುವಿನಿಂದಲೇ.

ಒಂದು ದಿನ ಸರಸು ಗದ್ದೆ ಕಡೆಗೆ ಹೊರಟವಳು ನಾಗುವಿನ ಮನೆಯಂಗಳಕ್ಕಾಗಿ ಹೋಗುತಿದ್ದಳು. ನಾಗು ತನ್ನ ಚಿಕ್ಕ ಒಡತಿಯನ್ನು ಆ ದಿನವೇ ಸರಿಯಾಗಿ ನೋಡಿದುದು. ಚಂದ್ರಮ್ಮನಿರುವಾಗ ಧನಿಗಳಲ್ಲಿಗೆ ದಿನಕ್ಕೊಮ್ಮೆ ಹೋಗುತಿದ್ದ ನಾಗು ಈಗ ಕಡಿಮೆ ಮಾಡಿದ್ದಳು. ಸಣ್ಣ ಒಡತಿ ಮನೆಯಿದಿರು ಬರುವಾಗ ಸುಮ್ಮನಿರಲಾಗುವುದೇ–ಚಂದ್ರಮ್ಮನಲ್ಲಿ ಹೇಗೋ ಹಾಗೆ ಸಲಿಗೆಯಿಂದ ಮಾತಾಡಲಿಲ್ಲ. ಅಂತೂ ಮಾತೆತ್ತಿದಳು—

"ದೂರ ಹೊರಟಿರಿ ಸಣ್ಣ ಒಡತಿಯರು...."

ಸರಸು ನಸುನಗುತ್ತಾ ಹೇಳಿದಳು.

"ಬಂದೆ ಹೀಗೆ....ಮನೆಯಲ್ಲೇ ಕುಳಿತು ಏನು ಮಾಡುವುದು.... ಬೇಸರ. ನಮ್ಮ ಊರೇ ಹೀಗಿಲ್ಲ. ಇಲ್ಲೆಲ್ಲಾ ಕಾಡು ಗುಡ್ಡ. ನಮ್ಮೂರಲ್ಲಿ ತುಂಬಾ ಮನೆ"

"ಹೌದು ಒಡತಿ ..,"

ಸರಸು ತನ್ನ ಸೀರೆಯ ಸೆರಗು ಜಡೆಯನ್ನೊಮ್ಮೆ ತಿದ್ದಿಕೊಂಡು ಪ್ರಶ್ನಿಸಿದಳು

"ನಾಗು ಅಂದ್ರೆ ನೀನೇ ಅಲ್ವೆ. ಅತ್ತೆಮ್ಮ ಹೇಳ್ತಾರೆ ಆಗಾಗ ನಾಗು ಈಗ ಈ ಕಡೆ ಬರೋದೆ ಇಲ್ಲಾಂತ"

"ಕೆಲಸದ ಜೋರು ಒಡತಿ. ಹಾಗೆ ಬರೋದಕ್ಕೆ ಆಗಿಲ್ಲ"

ಹೊಸ ಧನಿಗಳ ಒಡತಿಯನ್ನು ನೋಡಲು ಬಾಗಿಲಬಳಿ ಇಣುಕು ಹಾಕಿದ ಸೋಮುವನ್ನು ಕಂಡು ಸರಸು

"ಇವಳು ನಿನ್ನ ಮಗಳೇನು ನಾಗು"

"ಹೌದು ಒಡತಿ"

"ಶಾಲೆಗೆ ಕಳಿಸ್ತೀಯಾ........"

"ಇಲ್ಲಮ್ಮ. ನಮ್ಮಂತವರಿಗೆಲ್ಲ ಯಾಕೆ ಓದುಬರಹ....ಅದೂ ಹೆಣ್ಣು ಮಕ್ಕಳು ಮನೆಯಲ್ಲಿ ನಾಲ್ಕು ದಿನ ಮುಸುರೆ ತಿಕ್ಕುವ ಹೊತ್ತು .. "

"ಹಾಗಲ್ಲ ನಾಗು. ಹೆಣ್ಣುಮಕ್ಕಳಿಗೂ ವಿದ್ಯೆ ಬೇಕು."

ಎಂದು ಓದುಬರಹವನ್ನರಿತ ಸರಸು ಅದರ ಗಂಧಗಾಳಿಯಿರದ ನಾಗು ವಿನ ಮುಂದೆ ದೊಡ್ಡ ಉಪನ್ಯಾಸವನ್ನೇ ಬಿಚ್ಚಿದಳು. ಸರಸುವಿನ ಮಾತು ಮುಗಿಯುವ ಹೊತ್ತಿಗೆ ನಾಗು ಹೇಳಿದಳು

"ಸರಿಯಮ್ಮ...ವಿದ್ಯೆಯಿಲ್ಲದಿದ್ದರೂ ಚೆಂದವಾದ ಬುದ್ಧಿಯಿರ್ಬೇಕು. ಅದಿದ್ರೆ ಎಲ್ಲಾ ಸರಿ ಹೋಗುತ್ತದೆ ನೋಡಿ... "

ನಾಗುವಿನ ಈ ಅಜ್ಞಾನದ ಮಡಿಲಿನ ಮಾತು ಹೈಸ್ಕೂಲಿನಿಂದ ಬಂದ ಸರಸುವನ್ನು ಒಂದೇ ಬಾರಿಗೆ ಅಲುಗಾಡಿಸಿಬಿಟ್ಟಿತು. ಅದಕ್ಕವಳಿಗೆ ಫಕ್ಕನೆ ಉತ್ತರಿಸಲಾಗಲಿಲ್ಲ. ಅವಳು ನಾಗುವಿನ ಜಾಣ್ಮೆಗೆ ಮೆಚ್ಚಿಯೇ ಮೆಚ್ಚಿದಳು. ಮೂಡಲಾಗಿನ ಇಂತಹ ಮಲೆನಾಡಿನಲ್ಲೂ ಈ ರೀತಿ ಬುದ್ಧಿವಂತರಿರುವರೆಂಬ ಅರಿವಾದುದು ಅವಳಿಗೀಗಲೇ... ಅಂತೆ ನಾಗುವಿನ ಮಾತಿಗೆ ಸರಸು 'ಹೂಂ' ಗುಟ್ಟಿದಳು.

"ಏನಮ್ಮಾ....ನೀವು ಬುದ್ಧಿವಂತೆ! ನಿಮ್ಮನ್ನು ನೋಡಲು ನನಗೆ ಚಂದ್ರಕ್ಕನ ನೆನಪಾಗುತ್ತದೆ. ಅವರೂ ನಿಮ್ಮಂತೆ...."

ತನ್ನ ಅಕ್ಕ 'ಚಂದ್ರಮ್ಮ' ಎಂಬ ಶಬ್ದವಿರುವುದೆಂದು ಅವಳಿಗೆ ಕೆಲದಿನಗಳಿಂದಲೇ ಅಸ್ಪಷ್ಟವಾಗಿ ಅರಿವು ಬಂದಿತ್ತು- ಅವಳಿಗದನ್ನು ಸರಿಯಾಗಿ ತಿಳಿದುಕೊಳ್ಳಲು ಎಡೆಯಿರಲಿಲ್ಲ. ಅತ್ತೆ ಗಂಡನಲ್ಲಿ ಕೇಳಿ ತಿಳಿಯುವ ಎದೆಗಾರಿಕೆಯನ್ನು ಅವಳು ಮಾಡಿರಲಿಲ್ಲ. ಅವಳೀಗ ನಾಗುವಿನಿಂದ ಇದನ್ನು ತಿಳಿಯಲು **ಆತುರಪಟ್ಟಳು**.

"ಆದಾರು ನಾಗು.... ಚಂದ್ರಕ್ಕ ಅಂತೀಯಲ್ಲ"

"ಅಯ್ಯೋ....ನಿಮಗೆ ಗೊತ್ತೇ ಇಲ್ವೆ. ಧನೀರ ದೊಡ್ಡ ಒಡತಿ. ನಿಮಗಕ್ಕಾಗುತ್ತಾರೆ ದೇವರಂಥ ಒಡತಿ...."

ನಾಗುವಿನ ಕಣ್ಣಲ್ಲಿ ನೀರೂರಿದುದನ್ನು ಕಂಡು ನಾಗುವಿಗೆ ಅಕ್ಕನಲ್ಲಿ ತುಂಬಾ ಬಳಕೆಯಿರಬೇಕೆಂದು ಸರಸು ನಿಶ್ಚಯಿಸಿದಳು.

"ಆದೇನು ಅಕ್ಕ ಮನೆಬರೋದಂತಿಲ್ವೆ ನಾಗು"

"ಇಲ್ಲ .. ಇನ್ನು ಬರೋದಕ್ಕೂ ಸಾಕು! ಆದ್ರೆ...."

ನಾಗುವಿನಿಂದ ಮಾತು ಹೊರಡಲಿಲ್ಲ. ಸರಸುವೂ ಮುಂದೆ ಕೇಳುವಷ್ಟು ತಾಳ್ಮೆಯನ್ನೂ ತೆಕ್ಕೊಳ್ಳಲಿಲ್ಲ. ತನ್ನ ಗಂಡನಿಗೆ ಈ ಮೊದಲೊಮ್ಮೆ ಮದುವೆಯಾದ ಮಡದಿಯಿರುವಳು ಎಂದವಳಿಗೆ ಖಚಿತವಾಯಿತು. ಆಗಲೇ ಅವಳ ಉತ್ಸಾಹದಲ್ಲಿ ಅರ್ಧಪಾಲು ಚಂದ್ರಮ್ಮನು ಕಸಗೊಂಡಿದ್ದಳು. ದಂಪತಿಗಳ ಎಡೆಯಲ್ಲಿ ತಾನು ಪ್ರವೇಶಿಸಿ ಚಂದ್ರಮ್ಮನ ಸುಖವನ್ನು ಹಾಳು ಮಾಡಿದೆನಲ್ಲಾ ಎಂಬ ಯೋಚನೆಯ ಗುಂಗಿನಲ್ಲೇ ಮನೆಗೆ ಮರಳಿದಳು.

ಈಗೀಗ ನಾಗುವೆಂದರೆ ಸರಸುವಿಗೆ ಹೆಚ್ಚು ಆತ್ಮೀಯಳಾಗಿದ್ದಾಳೆ. ಆವಳಲ್ಲಿ ದಿನಾ ಅವಳ ಮನೆಗೆ ಹೋಗಿ ಗಂಟೆಗಟ್ಟಲೆಯಲ್ಲಿ ತುದಿ ಮೊದಲಿಲ್ಲದ ಮಾತುಗಳಿಂದ ಹರಟುತ್ತಾಳೆ. ಈ ಎಡೆಯಲ್ಲಿ ತನ್ನಕ್ಕನ ಪೂರ್ಣ ಪರಿಚಯವು ನಾಗುವಿನ ಬಾಯಿಂದ ಸರಸುವಿಗೆ ಸಿಕ್ಕಿರುವುದು. ಅಕ್ಕನ ಗುಣಕ್ಕೆ ತಂಗಿಯು ತಲೆದೂಗುವಳು. ಒಮ್ಮೊಮ್ಮೆ ನಾಗುವಿನಲ್ಲಿ ಹೇಳುವಳು

"ನಾಗೂ....ಒಂದು ದಿನ ನಾವಿಬ್ಬರೂ ಅಕ್ಕನ ಮನೆಗೆ ಹೋಗಬೇಕು. ನನಗೆ ಅಕ್ಕನನ್ನು ನೋಡಬೇಕೆನ್ನಿಸುತ್ತದೆ ನಾಗೂ...."

ಆದರೆ ಇದು ಸಾಧ್ಯವಿಲ್ಲವೇ ಎಂದು ಯೋಚಿಸಿದ ಸರಸು ತಾನು ಮೊದಲು ಯೋಚಿಸದೆ ಆಡಿದ ಮಾತನ್ನು ತಿರುಗಿಸುವಳು.

"ನಾಗೂ....ಅಕ್ಕನನ್ನು ಮನೆಗೆ ಬರುವಂತೆ ಮಾಡು. ನಾನು ಹೇಳಿದೆ ನೆಂದೇ ಹೋಗಿ ಹೇಳು". ಎಂದು.

ನಾಗು ಎಲ್ಲದಕ್ಕೂ ಹೂಂಗುಟ್ಟುವಳು. ಇದರಿಂದಲೇ ಅವಳು ಹೊಸ ಒಡತಿಯನ್ನು ಅಳೆದುಬಿಟ್ಟಿದ್ದಾಳೆ. ಏನೂ ತಿಳಿಯದ ಒಳ್ಳೆ ಹೃದಯದ ಹುಡುಗಿಯಿವಳು. ಹುಡುಗಾಟಿಕೆ....ಮಾತಿನ ಮಲ್ಲಿ....ಪಾಪ ಯಾವ ಸುಖ ಕ್ಕೆಂದು ಗುರಿಕಾರರ ಕೊಳಿರಗೆ ಕಟ್ಟಿದರೋ—ಎಂದು.

೦ ೦ ೦ ೦ ೦ ೦

ಚಂದ್ರಮ್ಮ ತವರನ್ನು ಸೇರಿದ ಬಳಿಕ ತಿಂಗಳಿಗೊಮ್ಮೆಯಾದರೂ ನಾಗು ಸಂಪಾಜೆಗೆ ಹೋಗಿ ಬರುತ್ತಿದ್ದಳು. ಕ್ಲೊಲು–ನೇಜಿ ಮುಗಿದು ಹೋದರೆ ನಾಲ್ಕೈದು ದಿನ ಅಲ್ಲಿ ನಿಂತು ಬರುವಳು ಸಂಪಾಜೆಯಿಂದ ಚಂದ್ರಮ್ಮನ ಸುದ್ದಿ ಸರಸುವಿಗೂ ಗುರಿಕಾರರ ಮನೆಸುದ್ದಿ ಸಹಿತ ಸರಸುವಿನ ಪರಿಚಯ ಚಂದ್ರಮ್ಮನಿಗೂ ಎಡೆಯಲ್ಲಿ ನಿಂತು ನಾಗು ಮಾಡಿಸುತಿದ್ದಳು.

ಆ ದಿನ ನಾಗು ಸಂಪಾಜೆಯಿಂದ ಬಂದಿದ್ದಳಷ್ಟೆ. ಸರಸು ಅವಳನ್ನು ಕಾಣಲು ಮನೆಗೇ ಓಡಿ ಬಂದಳು. ನಾಗುವಿನ ಮನೆಯಲ್ಲಿ ಬಾಯಾರಿದವ ಳಂತೆ ಮಾತಿಗೆ ಕುಳಿತಳು.

"ಸಂಪಾಜೆಯಿಂದ ಯಾವಾಗ ಬಂದೆ ನಾಗು"

"ಇದೀಗ ಬಂದೆ ಸರಸಕ್ಕ"

"ಅಕ್ಕ ಹೇಗಿದ್ದಾರೆ"

"ಚೆನ್ನಾಗಿದ್ದಾರೆ"

"ನನ್ನನ್ನು ಕೇಳಿದರೇ... ನಾನು ಹೇಳಿರುವುದನ್ನು ಹೇಳಿದಿಯಾ.... ಮರೆತಿಯಾ..."

"ಹೇಗೆ ಮರೆಯಲಿ ಸರಸಕ್ಕ.. ನೀವು ಹೇಳಿದಂತೆ ಹೇಳಿದೆ... ಪಾಪ! ಚಂದ್ರಕ್ಕ ಕಣ್ಣಲ್ಲಿ ನೀರು ತಂದುಕೊಂಡು ಹೇಳಿದರು. ನನಗಂತಹ ತಂಗಿ ಸಿಕ್ಕಿದುದು ನಮ್ಮವರ ಭಾಗ್ಯ ಎಂದು. ಚಂದ್ರಕ್ಕ ನಿಮ್ಮನ್ನು ತುಂಬಾ ಹೊಗುಳುತ್ತಾರೆ ಸರಸಕ್ಕ...."

"ಹಾಸ್ಯ ಮಾಡಬೇಡ ನಾಗು....ಸದ್ಯ ಇತ್ತ ಬರ್ತ್ತಾರೇನು.. "

"ಕೇಳಿದೆ....ಅದಕ್ಕವರು ಬರಲೇನಾಗಬೇಕು. ಎಂದಾದರೊಂದು ದಿನ ಬಂದೇ ಬರುತ್ತೇನೆ ಎಂದರು. ಬಸುರಿಯಲ್ಲವೆ. ಚಂದ್ರಕ್ಕನಿಗೀಗ ಆರು ತಿಂಗಳಂತೆ"

ಆಶ್ಚರ್ಯದಿಂದ ಸರಸು ಕೇಳಿದಳು.

"ಅಕ್ಕ ಬಸುರಿಯೇ ನಾಗೂ..."

"ಅದೇಕೆ ಸರಸಕ್ಕ....ನೀವೂ ಎರಡು ವರ್ಷಗಳಲ್ಲಿ ಮಗುವಿನ ತಾಯಿ ಆಗುವಿರಿ"

"ಸುಮ್ಮನಿರು ನಾಗೂ....ನಿನಗೆ ಯಾವಾಗಲೂ ತಮಾಷೆಯೇ...."

ತಾನು ಮಗುವಿನ ತಾಯಿಯಾಗುವೆನೆಂದು ಕೇಳಿ ತಿಳಿದ ನಾಗುವಿನ ಮಾತಿಗೆ ಸರಸು ಸಂತೋಷದಿಂದ ನಾಚಿಕೆಯ ತಲೆ ಬಾಗಿದಳು. ಮತ್ತು ಕೇಳಿದಳು

"ಅದೇನು ನಾಗು... ಅಕ್ಕ ಹೆರೋದಿಲ್ಲಾಂತ ನನ್ನ ತಿರುಗಿ ಮದುವೆ ಮಾಡಿಸಿರೋದು ಅತ್ತೆ. ಅಕ್ಕ ಬಂಜೆಯೆಂದು ಜನ ಊರೆಲ್ಲಾ ಆಡ್ತಾರೆ."

"ಹೌದು ಸರಸಕ್ಕ. ಆದರೆ ಎಲ್ಲದಕ್ಕೂ ಒಂದು ಕಾಲವಿದೆ. ಆ ಕಾಲ ಈಗ ಚಂದ್ರಕ್ಕನ ಪಾಲಿಗೆ ಬಂದಿದೆ. ಅಂತೆಯೇ ಚಂದ್ರಕ್ಕ ಮಗುವಿನ ತಾಯಿ ಯಾಗುವರು"

ನಾಗುನ ಮಾತಿಗೆ ಸರಸು ಮುಗ್ಧಳಾದಳು. ಮತ್ತೂ ಅವಳು ಮಾತು ಕೇಳಿದಳು

"ಇಲ್ಲಿಂದ ಹೋಗುವ ಮೊದಲೇ ಚಂದ್ರಕ್ಕನಿಗೆ ಮೊಯ್ಯುವ ಕುದಿ ನಿಂತಿತ್ತು. ಇನ್ನು ತಾಯಿಮಕ್ಕಳನ್ನು ನಿಮ್ಮ ಅತ್ತೆ ಧನಿಯರು ಒಟ್ಟು ಹೋಗಿ ಕರೆತಂದರಾಯಿತು. ಅಲ್ಲವೇ ಸರಸಕ್ಕ"

ನಾಗುವಿನ ಯೋಜನೆಗೆ ಸರಸು ಸೈಗುಟ್ಟಿದಳು. ಕಾವೇರಮ್ಮನು ತೋಟದಿಂದ ಬರುವ ಹೊತ್ತು. ಹೊತ್ತಾಯಿತೆಂದು ಸರಸು ಪಕ್ಕನೆ ನಾಗು ವಿನ ಮನೆಯಿಂದ ಕಾಲ್ಕಿತ್ತಳು. ದಾರಿಯುದ್ದಕ್ಕೂ ಬಂಜೆಯೆಂದಾಡುತಿದ್ದ ಅಕ್ಕ ತಾಯಿಯಾಗುವಳು ಎಂಬ ಸಂತೋಷದ ಸುದ್ದಿ ಅವಳ ಮನತಣಿಸು ತಿತ್ತು.

ತವರಲ್ಲಿರುವ ಚಂದ್ರಮ್ಮ ಬಸುರಿಯೆಂದು ಕ್ರಮೇಣ ಕಾವೇರಮ್ಮ ಗುರಿಕಾರರಿಗೆ ತಿಳಿದುಬಂದಿತು. ಗುರಿಕಾರರಿಗೆ ಒಮ್ಮೊಮ್ಮೆ ಅಲ್ಲಿಗೆ ಹೋಗಿ ಬರೋಣವೇ ಎನಿಸುತ್ತಿತ್ತು. ಆದರೆ ಹೇಗೆ ಹೋಗಲಿ....ಎಂಬ ಸಂಶಯವು ಅವರನ್ನು ತಡೆಯುತಿತ್ತು.

ತವರಿನಲ್ಲೀಗ ತುಂಬಿದ ಬಸುರಿ ಚಂದ್ರಮ್ಮನು ಸುಮ್ಮನಿರುತ್ತಿರಲಿಲ್ಲ. ಮನೆಯ ಎಲ್ಲಾ ಕೆಲಸಗಳಲ್ಲಿ ಅಮ್ಮ ಅತ್ತಿಗೆಯರಿಗೆ ನೆರವಾಗುವಳು. ದಿನ ಬೆಳಗಾಗಬೇಕಾದರೆ ಕಾಫಿ ..ಮಧ್ಯಾಹ್ನದ ಅಡುಗೆ ತಯಾರಿ–ಅತ್ತಿಗೆಯ ಮಕ್ಕಳನ್ನು ವಿಾಯಿಸಿ ಉಣಿಸುವುದು—ಇವೆಲ್ಲಾ ಕೆಲಸಗಳಿಂದಲೇ ಅವಳು ದಿನ ದೂಡುವಳು.

ಮಗಳು ಮನೆಗೆ ಬಂದ ಬಳಿಕ ಚಂದ್ರಮ್ಮನ ತಾಯಿಗೂ ಹೆಚ್ಚು ಕೆಲಸ ಬೀಳುತ್ತಿರಲಿಲ್ಲ ಕುಳಿತೇ ಸುಮ್ಮನಾಗುವರು. ಕೆಲಸದಲ್ಲಿ ತಲ್ಲೀನಳಾದ ಚಂದ್ರಮ್ಮನಿಗೆ ಬಾಹ್ಯ ಸುಖದುಃಖಗಳ ಅನುಭವವು ಮರೆತು ಹೋಗಿ ತುಸು ಕಾಲವಾದರೂ ಸುಖವಾಗುತಿತ್ತು ಆದರೂ ಮಧ್ಯಾಹ್ನ ಉಂಡು ತುಸು ವಿರಾಮದಲ್ಲಿ ಕುಳಿತಳೆಂದರೆ ಅಲ್ಲಿಯೇ ಯೋಚನೆಗಳು ಕೆರಳುವುವು. ನೆನಪು ಮರುಕೊಳಿಸುವುದು. ತಾನು ಕುಳಿತಲ್ಲಿಂದಲೇ ಗುರಿಕಾರರ ಮನೆಗೆ ಪ್ರಯಾಣ ಮಾಡುವಳು.

ಅಬ್ಬಿಯ ಧೋೕ....ದನಿಯು ಅವಳ ಕಿವಿಯನ್ನು ತುಂಬುವುದು. ಧಡ್–ಧಡಾಲ್ .. ಧಟ್–ಧಟಾಲ್.......

ಅಬ್ಬರ ತೊರೆಯ ಹೊನಲುಗಳ ಚಿತ್ರಮಾಲೆ ಅವಳ ಕಣ್ಣೆದುರು ಸುತ್ತುವುದು. ಬೆಳ್ಳಿ ನಾಯಿ ...ಗೋಪಿ ದನ....ಅದರ ಪುಟ್ಟ ಕರು–ತೋಟ–ಗದ್ದೆ–ನಾಗುವಿನ ಮನೆಯನ್ನೆಲ್ಲಾ ಅವಳು ಕುಳಿತಲ್ಲಿಂದಲೇ ನೋಡುವಳು ತವರಿನಲ್ಲಿ ಆಕೆ ಕಾಣದಿದ್ದ ಮುಖವೆಂದರೆ ಸರಸುವಿನದು. ಅವಳ ಗುಣಗಾನ ನಾಗುವಿನಿಂದ ಕೇಳಿ ತಿಳಿದಿದ್ದ ಆಕೆಗೆ ತಂಗಿಯನ್ನೊಮ್ಮೆ ನೋಡಬೇಕೆನಿಸುವುದು. ಆದರೆ ಹೇಗೆ ಸಾಧ್ಯ. ತಾನಲ್ಲಿಗೆ ಹೋಗಬೇಕು. ಇಲ್ಲವೇ ತಂಗಿಯನ್ನಿಲ್ಲಿಗೆ ಕರೆಸಬೇಕು. ಹುಚ್ಚು ಹೂಗಳಂತಹ ಆಲೋಚನೆಗಳು ಅವಳ ಮನಸ್ಸಿನಿಂದ ಉರುಳುವುವು. ಹೀಗೆ ಯೋಚಿಸುತ್ತಾ ಕುಳಿತಳೆಂದರೆ ಅವಳನ್ನು ತಾಯಿಯೇ ಬಂದು ಎಚ್ಚರಿಸಬೇಕಿತ್ತು. ಮಗಳು ಹೀಗೆ ದೆವ್ವಹಿಡಿ

ದನಳಂತೆ ಕುಳಿತಳೆಂದರೆ ತಾಯಿಯ ಕರುಳು ಬೇಯುತಿತ್ತು. ಆದುದರಿಂದ ಚಂದ್ರವ್ವ ತವರಿನವರೆದುರು ನಗುನೊಗದಿಂದಿರಲು ಯತ್ನಿಸುತಿದ್ದಳು.

ಚಂದ್ರವ್ವನ ತಾಯಿ ಒಳ್ಳೆ ಹೃದಯದ ಮುದುಕಿ. ಮನೆಗೆ ಬಂದು ಹೋದವರಲ್ಲಿ ಮಗಳ ದೌರ್ಭಾಗ್ಯದ ಕುರಿತು ಕಣ್ಣೀರಿಡುವರು. ಆದರೆ ಕಾಲವು ಹೀಗೆ ಇರಲಾರದು ಸದ್ಯದಲ್ಲೇ ಮಗಳು ಮಗುವಿನ ತಾಯಿಯಾಗುವಳು. ಆಗ ಅಳಿಯನು ತಾನಾಗಿ ಬಂದು ಮಗಳನ್ನು ಕರೆದೊಯ್ಯಬಹುದು. ಮುಂದೆಗೆ ಸರಿಹೋಗಬಹುದು . ಎಂದು ಅವರ ಮನಸ್ಸು ಗುಣಿಕೆ ಹಾಕುತಿತ್ತು. ಆ ದಿನವು ಬೇಗ ಬರಲೆಂದು ಹಾರೈಸುತಿತ್ತು. ಮಗಳ ಕೈಯಲ್ಲಿ ಪತಿವ್ರತಾ ಮಹಿಮೆ ಓದಿಸಿ ತಾಯಿ ತಾನೂ ಕುಳಿತು ಕೇಳುತಿದ್ದಳು. ಪುಸ್ತಕ ಹಿಡಿದು ತಾಯಿಯೆದುರು ಕುಳಿತ ಚಂದ್ರವ್ವನಿಗೆ "ತಾನು ತವರಿನಲ್ಲಿರುವುದು ಸರಿಯೇ...." ಎಂಬ ಚಿಂತೆ ಬಾಧಿಸುತಿತ್ತು. ಇದು ಅಕೆಯನ್ನು ಹೆಚ್ಚು ಓದಲು ಬಿಡುತ್ತಿರಲಿಲ್ಲ. ತಲೆನೋಯುವುದೆಂದು ತಾಯಿಗೆ ಹೇಳಿ ಪುಸ್ತಕ ಮುಚ್ಚುತಿದ್ದಳು.

ತವರಿನಲ್ಲಿ ಚಂದ್ರವ್ವನೆಂದರೆ ಎಲ್ಲರಿಗೂ ಪ್ರೀತಿ. ಮನೆಯ ಪುಟ್ಟ ಮತ್ತು ಗೋಪಿಯರಿಗೆ ಅತ್ತೆಯೆಂದರೆ ಆಯಿತು. ಊಟ-ನಿದ್ದೆ-ಆಟ-ಪಾಠ-ಲೂಟಿ ಎಲ್ಲವೂ ಅವಳೊಡನೆ ಗೋಪಿಗೆ ಅತ್ತೆಯೇ ತಲೆಬಾಚಿ ಹೂ ಮುಡಿಸಬೇಕು. ಪುಟ್ಟ ಅತ್ತೆಯ ಸೆರಗಿನಲ್ಲಿ ಜೋಲಾಡಿ ಆಕೆಯ ಬೆನ್ನು ಹತ್ತಿ ಪ್ರಯಾಣ ಮಾಡದ ದಿನವಿಲ್ಲ. ಹೀಗೆ ಚಂದ್ರವ್ವನೊಡನೆ ಛಲಹಿಡಿಯುವ ಮಕ್ಕಳನ್ನು ಮನೆಯವರೇ "ಅತ್ತೆಗೆ ಉಪದ್ರಕೊಡಬೇಡಿ" ಎಂದು ಗದರಿಸುವರು, ಮಕ್ಕಳಿಗೆ ಗದರಿಸಿ ಹೊಡೆಯುವುದೆಂದರೆ ಚಂದ್ರವ್ವನಿಗಾಗದು. ಇಂಥ ಮಕ್ಕಳು ಮನೆತುಂಬಾ ಬೇಕು ಎಂವನಳ ಮನಸ್ಸು. ಮಕ್ಕಳು ನಿದ್ದೆ ಹೋಗುವ ತನಕ ಬಳಿಯಲ್ಲೆ ಮಲಗಿಸಿ ಅವರಿಗೆ ಕತೆ ಹೇಳುವಳು. ಮಕ್ಕಳಿಗೆ ಅವಳ ಬಾಯಿಯಿಂದ ಧ್ರುವ-ಚಂದ್ರಹಾಸರ ಕತೆ ದಿನವೂ ಕೇಳಬೇಕು.

ಒಂದು ದಿನ ಪುಟ್ಟ ತನ್ನ ತಾಯಿಯಲ್ಲಿ ಕೇಳಿದನು

"ಅತ್ತೆಯ ಹೊಟ್ಟೆ ಅಷ್ಟೇನಮ್ಮಾ ದೊಡ್ಡ"

"ಕಳ್ಳಾ....ಹಾಗೆ ಹೇಳಬಾರದು"

ಎಂದು ಅವನನ್ನು ಅವನ ಕಿವಿ ಹಿಂಡಿದಳು. ದೂರು ಅಜ್ಜಿಯ ಬಳಿಗೆ ಹೋಯಿತು. ನಗುತ್ತಾ ಮೊಮ್ಮಗನಲ್ಲಿ ಅಜ್ಜಿ ಹೇಳಿದಳು

"ಅತ್ತೆಯ ಹೊಟ್ಟೆಯಲ್ಲಿ ಯಾರಿದ್ದಾನೆ ಗೊತ್ತೇ.... ನಿನ್ನ ಭಾವ"

ಅಜ್ಜಿಯ ಸಮೀಪ ಬಂದು ಗೋಪಿ ತೊದಲಿನಿಂದ ಕೇಳಿದಳು

"ಏನಜ್ಜೀ........"

"ನಿನ್ನ ಅತ್ತೆ ಹೆರೋದು ಭಾವನನ್ನೊ? ಅತ್ತಿಗೆಯನ್ನೊ? ಹೇಳು

ಅಜ್ಜಿ ಮೊಮ್ಮಗಳ ಗಲ್ಲವನ್ನು ಹಿಡಿದು ಕೇಳಿದಳು. ಗೋಪಿ ಒಮ್ಮೆಗೇ ಹೇಳಿದಳು ಕೈತಟ್ಟಿ

"ಭಾವಾ . ...."

ಪುಟ್ಟ ಗೋಪಿಯರು 'ಭಾವಾ' ಎಂದು ಕುಣಿದಾಡಿದರು.

ಮಕ್ಕಳ ಈ ಮಾತು ಆಟಗಳನ್ನು ನೋಡಿದ ಚಂದ್ರಮ್ಮನ ಮನಸ್ಸು ತಣ್ಣಗಾಗುವುದು. ಕಣ್ಣಿನಲ್ಲಿ ಕಾಂತಿ ಮೂಡುವುದು.

ಚಂದ್ರಮ್ಮನಿಗೆ ಜೈಮಿನಿಯಲ್ಲಿ ಬಹಳ ಪ್ರೀತಿ. ಚಿಕ್ಕಂದಿನಲ್ಲಿ ತಂದೆಯೇ ಬಳಿಯಲ್ಲಿ ಕುಳ್ಳಿರಿಸಿಕೊಂಡು ಅವಳಿಂದ ಓದಿಸುತಿದ್ದರು.

ಅಂದು ಮನೆಯಲ್ಲಿ ಯಾರೂ ಇರಲಿಲ್ಲ. ಮಧ್ಯಾಹ್ನದ ಊಟ ತೀರಿಸಿ ಚಂದ್ರಮ್ಮ ಜೈಮಿನಿ ಭಾರತವನ್ನು ಕೈಗೆ ತೆಗೆದುಕೊಂಡಳು. ಹಿಂದಿನ ದಿನ ಓದಿ ಮುಗಿಸಿಟ್ಟ ಗುರುತಿನಿಂದ ಮುಂದೆಗೆ ದೃಷ್ಟಿ ಹಾಕತೊಡಗಿದಳು.

ಸೀತಾವನವಾಸದ ಭಾಗವದು—ನಿಷ್ಕಾರಣವಾಗಿ ಅಗಸನೊಬ್ಬನ ದೂಷಣೆಗೆ ಬೆದರಿ ಶ್ರೀರಾಮನು ತನ್ನ ಪ್ರೇಮದ ಮಡದಿಯನ್ನು ಅದರಲ್ಲೂ ತುಂಬಿದ ಬಸುರಿಯನ್ನು ಕಾಡಿನಲ್ಲಿ ಬಿಟ್ಟು ಬರಲು ಲಕ್ಷ್ಮಣನಿಗೆ ಆಜ್ಞಾಪಿಸುತ್ತಾನೆ. ಕಾಡಿನಲ್ಲಿ ಅಸಹಾಯಕ ಸ್ಥಿತಿಯಲ್ಲಿರುವ ಸೀತೆಯೇ ಅವಳ ಕಣ್ಣಿಗೆ ಮೂರ್ತಿವತ್ತಾಗಿ ಕಾಣಿಸಿದಳು 'ಅಯ್ಯೊ ...ಹೆಣ್ಣಿನ ಬಾಳ್ವೆಯೇ..." ಓದುತ್ತಾ ಮುಂದುವರಿದಂತೆಯೇ ಒಂದೆರಡು ಕಂಬನಿಗಳ ತಟಕು ಬಿದ್ದು ಪುಟವನ್ನು ಒದ್ದೆ ಮಾಡಿತು. "ಕಡೆಗೆ ಕರುಣಾಳು ರಾಘವನಲ್ಲಿ ತಪ್ಪಿಲ್ಲ ..ಪೆಣ್ಣಾಗಿ ಜನಿಸಿದೆನ್ನಯ.... ..." ಪದ್ಯವನ್ನು ದಾಟಿ ಹೋಗಲು ಅವಳಿಂದಾಗಲಿಲ್ಲ. ಅದೇ ವಾಕ್ಯ ಇನ್ನೊಮ್ಮೆ ಅವಳ ಗಂಟಲಲ್ಲಿ ಸಾರು

ಕೊಳಿಸಿತು. ಗದ್ಗದಿಸಿತು–ಅಳುವು ಉಕ್ಕಿಬರಲು ಪುಸ್ತಕವನ್ನೇ ಮುಖ ಕ್ಕೊತ್ತಿಕೊಂಡಳು.

ಈಗೀಗ ಚಂದ್ರಮ್ಮನನ್ನು ಮೌನದಲ್ಲಿ ಕಾಡುತಿದ್ದ ಸಮಸ್ಯೆಯೆಂದರೆ ಅದೊಂದೇ. ತಾನು ತವರಿಗೆ ಬಂದುದು ಸರಿಯೇ .. ಎಲ್ಲಿಯ ವರೆಗೆ ತವರಿ ನಲ್ಲಿರಬಹುದು ...... ಹೊಟ್ಟೆಯಲ್ಲಿದ್ದ ಮಗುವಿಗಾದರೂ ಮನೆಯೊಂದು ಬೇಡವೇ?" ಇವಳು ಉತ್ತರಿಸಲಾರಳು. ಕಳೆದ ತನ್ನ ದಾಂಪತ್ಯಜೀವನ. ಗುರಿಕಾರರ ತುಂಬುಹೃದಯ ನೆನೆದು ಸವಿಕನಸು ಕಟ್ಟುವಳು. ಅತ್ತೆಯ ಹೃದಯವನ್ನವಳು ಈ ವರೆಗೆ ಭೇದಿಸಿ ಅರಿತುಕೊಳ್ಳಲಾರದವಳಾಗಿದ್ದಳು ಆದರೆ ... ಇದೀಗಅತ್ತೆಯಲ್ಲಿಯೂ ಅವಳು ತಪ್ಪು ಹೊರಿಸಲಾರಳು. ಹೆಣ್ಣಾಗಿ ಹುಟ್ಟಿದ ತನ್ನ ತಪ್ಪನ್ನೇ ತಿಳಿದವಳು ತನ್ನ ಭಾಗ್ಯಕ್ಕೆ ಕಣ್ಣೀರೊರಸುವಳು. ದಿನವೂ ಜೈಮಿನಿಯನ್ನೋದುತಿದ್ದ ಆಕೆ ವನವಾಸದ ಸೀತೆಯ ಬಳಿ ಸೇರು ವಳು. ಓದಿ ಮುಗಿಸಿ 'ಧನ್ಯೆ ತಾಯಿ' ಎಂದು ಪುಸ್ತಕವನ್ನೇ ಕಣ್ಣಿಗೊತ್ತಿ ಕೊಳ್ಳುವಳು.

ಮಗಳಿಗೆ ಶೋಭನ ಸಂಸ್ಕಾರಗಳನ್ನು ಶಾಸ್ತ್ರಿಗಳು ಬಹು ವಿಜೃಂಭಣೆ ಯಿಂದಲೇ ಮಾಡಿಸಿದ್ದರು. ಗುರಿಕಾರರ ಮನೆಗೆ ಹೇಳಿಕಳುಹಿಸಿರಲಿಲ್ಲ. ಅಲ್ಲಿಂದ ಯಾರೂ ಬರಲಿಲ್ಲ. ನಾಗು ಮಾತ್ರ ಬಂದಿದ್ದಳು. ಸುದ್ದಿ ಮಾತ್ರ ಸರಸು ಮುಖಾಂತರ ಗುರಿಕಾರರ ಮನೆಗೆ ಮುಟ್ಟಿತ್ತು

ಚಂದ್ರಮ್ಮನು ಹೆತ್ತ 'ಅಮೆ' ಸುದ್ದಿಯನ್ನು ಗುರಿಕಾರರ ಮನೆಗೆ ತಂದು ಮುಟ್ಟಿಸಿದವಳು ನಾಗುವೇ. ಚಂದ್ರಮ್ಮನು ಹಡೆದ ಸುದ್ದಿಯನ್ನು ಕೇಳಿ ನಾಗು ಸಂಪಾಜೆಗೆ ಓಡಿದ್ದಳು. ಬಾಣಂತಿ ಚಂದ್ರಮ್ಮನ ಪಕ್ಕದಲ್ಲಿ ಮಲಗಿದ್ದ ಸಣ್ಣ ಗುರಿಕಾರರನ್ನು ಎತ್ತಿ ಮುದ್ದಿಸಿದಳು.

"ಮುಖವೆಲ್ಲಾ ಥೇಟು ಗುರಿಕಾರರದೇ ..."

ಎಂದು ಹೇಳಿದ ನಾಗುವಿನ ಮಾತಿಗೆ ಬಾಣಂತಿ ಚಂದ್ರಮ್ಮ ಮುಗುಳು ನಕ್ಕಳು. ಆದರೆ ಗುರಿಕಾರಿಕೆಯಿಲ್ಲದ ಗುರಿಕಾರನಂತೆ ಅವಳ ಮುಖವು ಸಪ್ಪೆ ಗಟ್ಟಿತು. ಕಣ್ಣೀರಿನ ನಿಟ್ಟುಸಿರೊಂದು ಹೊರಬಿತ್ತು.

ಚಂದ್ರಮ್ಮ ಬಾಣಂತಿಯಾಗಿ ಮಲಗಿದ ಸಮಯದಲ್ಲೇ ಅವಳ ತಂದೆ ಶಾಸ್ತ್ರಿಗಳೂ ಅಸೌಖ್ಯದಿಂದ ಮಲಗಿಬಿಟ್ಟರು. ಮೊದಲೇ ಕ್ಷಯರೋಗಿಗಳ

ವಸು. ಈ ಬಾರಿ ಪ ಗಳು ಬಾಣಂತಿತನದಿಂದ ಏಳಬೇಕಾದರೆ ತಮ್ಮ ಇಹ ಯಾತ್ರೆ ತೀರಿಸಿಬಿಟ್ಟರು. ಎಂತಿದ್ದರೂ ತಾನು ಸಾಯುವ ಮೊದಲು ಮಗಳ ಮಗುವನ್ನು ನೋಡಿ ಸಾಯುವ ಸುಖ ಸಿಕ್ಕಿತಲ್ಲಾ ಎನ್ನುತಿದ್ದ ಶಾಸ್ತ್ರಿಗಳು, ಪ್ರಾಣಬಿಡುವ ದಿನ ಬೆಳಗ್ಗೆ ಮಗಳೊಡನೆ ಮಗುವನ್ನು ಬಳಿಯಲ್ಲಿ ಕುಳ್ಳಿರಿಸಿ ಕೈಯಿಂದ ಮೈ ಸವರಿ ಮಗುವನ್ನು ಮನಮುಟ್ಟಿ ಹರಸಿ, ಮಗುವಿಗೆ ಗುರಿಕಾರ ಚಂದ್ರನೆಂದು ಹೆಸರಿಟ್ಟು ಪ್ರಾಣ ಬಿಟ್ಟಿದ್ದರು.

ತಂದೆ ತೀರಿ ಹೋಗಿ ಮೂರು ತಿಂಗಳಾಗಿರಲಿಲ್ಲ. ತಾಯಿಯೂ ಉಳಿ ವಾಸೆ ತನಗಿಲ್ಲವೆಂದು ತಿಳಿದ ಚಂದ್ರಮ್ಮನಿಗೆ ದಿಕ್ಕೇತೋಚದಾಯಿತು. ಬಂದ ಜ್ವರ ಆ ದಿನ ವಿಪರೀತಕ್ಕೇರಿತ್ತು. ಮದ್ದುಕೊಡುವ ವೈದ್ಯರು ಪರೀಕ್ಷಿಸಿ ಸನ್ನಿಪಾತಕ್ಕೆ ಸೇರಿದೆಯೆಂದರು. ಔಷಧಿಕೊಟ್ಟು ಶುಶ್ರೂಷೆ ಮಾಡುವ ಸೇವೆ ಚಂದ್ರಮ್ಮನಿಗೆ ಮೂರು ನಾಲ್ಕು ದಿನ ಮಾತ್ರ ಸಿಕ್ಕಿತು. ತಾಯಿಯೂ ತೀರಿ ಹೋಗಲು ಆಕೆಗೆ ಸಿಡಿಲು ಎರಗಿದಂತಾಯಿತು. ಅಣ್ಣ ಅತ್ತಿಗೆಯರು ಮನೆ ಯಲ್ಲಿ ಒಳ್ಳೆಯವರಾಗಿದ್ದರೂ ತಾನಿರುವುದು ತವರಿನಲ್ಲಿ ಎಂಬ ಅನುಭವವು ಅವಳಿಗೆ ಮೊದಲಿನಿಂದ ಹೆಚ್ಚು ಅನುಭವವಾಗ ಹತ್ತಿತು.

ಒಮ್ಮೊಮ್ಮೆ ತನ್ನ ಪಾಡನ್ನು ನೆನೆದು ಮರುಗುವ ಅವಳ ಮರುಕಕ್ಕೆ ಮಗುವಿನ ನಗೆಯಾಟವೇ ಮದ್ದು. ಮನದ ಮರುಕವನ್ನು ಅದು ಮಾಸು ತಿತ್ತು. ಅದರೆಡೆಯಲ್ಲಿ ಆಕೆಯ ಮನಸ್ಸು ಹೇಳುತಿತ್ತು "ಚಂದ್ರನು ಮುಂದೆಗೆ ಗುರಿಕಾರನಾಗಬೇಕು ಚಂದ್ರನು ತನ್ನ ಮನೆಯಲ್ಲೆ ಬಳೆಯಬೇಕು"— ಎಂದು ಆದರೆ ತಾನು ಗುರಿಕಾರರ ಮನೆಯಲ್ಲಿ ಮರಳಿ ಸಂಸಾರ ಮಾಡುವುದು ಅವಳಿಗಾಸೆಯಿರಲಿಲ್ಲ. ತಂಗಿಯು ಎಷ್ಟು ಒಳ್ಳೆಯವಳೆಂದು ತಿಳಿದಿದ್ದರೂ ಆ ಎಳೆಯಳ ದಾಂಪತ್ಯ ಸುಖದಲ್ಲಿ ತಾನು ಪಾಲುಗಾರಳಾಗಲು ಅವಳು ಹಿಂಜರಿಯುವಳು. ಹೀಗೆ ಎದೆಗೆಟ್ಟ ಅವಳಿಗೆ ತನ್ನ ತಿಳಿಹೃದಯದ ತಂಗಿಯು ತನ್ನ ಮಗುವನ್ನು ಅವಳ ಮಗುವಿನಂತೆಯೇ ಸಾಕಿಕೊಳ್ಳಬಹುದು—ಎಂಬ ತೃಪ್ತಿಯು ನೆಮ್ಮದಿಯನ್ನುಂಟುಮಾಡುತಿತ್ತು.

ತಾಯಿ ಈ ರೀತಿ ಸಂಕಟವನ್ನುಂಡು ಕೃಶಳಾಗಿ ಕಾಣಿಸುತಿದ್ದರೂ ಚಂದ್ರನು ಮುದ್ದಾಗಿ ಬೆಳೆಯಹತ್ತಿದ. ಮಗುವಿಗೇನಿದೆ ಮರುಕ? ಯಾವಾ

ಗಲೂ ಬಿಚ್ಚು ನಗೆಯಿಂದೊಪ್ಪುವ ಚಂದ್ರ ಮನೆಯುವರನ್ನು ಬಂದು ಹೋದವರನ್ನು ನಗಿಸಿ ಮನತಣಿಸಿ ನಗುವನು. ನಾಗುವು ಸಂಪಾಜೆಗೆ ಬಂದಳೆಂದರೆ, ಅವಳೇ ಅವನನ್ನು ಹಿಡಿಯುತ್ತಿರಬೇಕು. ಹೀಗೆ ಸಂಪಾಜೆಯಿಂದ ಮರಳಿದ ನಾಗು "ಇದೀಗ ಮಗ್ಗುಲು ಮುಚ್ಚುತ್ತಾನೆ. ಅಂಬೆಗಾಲಿಕ್ಕಲು ಆರಂಭಿಸಿದ್ದಾನೆ. ಕೈಹಿಡಿದು ನಿಲ್ಲುತ್ತಾನೆ" ಎಂದು ಒಂದೊಂದು ಬಾರಿ ಒಂದೊಂದು ಸುದ್ದಿಯನ್ನು ಸರಸುವಿಗೆ ತಂದು ಮುಟ್ಟಿಸುವಳು. ಸರಸುವಿಗೆ ಚಂದ್ರನ ಕುರಿತು ಕೇಳಿದಷ್ಟೂ ಸಾಲದು. ನಗುತ್ತಾ ಸರಸು

"ಮಗು ಯಾರಂತೆ ಇದೆ ನಾಗೂ...."

ಎಂದು ಕೇಳಿದರೆ ನಾಗುವೂ ತಮಾಷೆಯಾಡುವಳು.

"ಮುಖವೆಲ್ಲಾ ಸಣ್ಣಯ್ಯನವರದೇ. ಬಣ್ಣದಲ್ಲಿ ತಾಯಿಯಂತೆ. ನಗೆಯಲ್ಲಿ ಸರಸಕ್ಕನಂತೆ"

ಸರಸುವಿಗೂ ಚಂದ್ರನನ್ನು ನೋಡಬೇಕೆಂಬ ಆಸೆ. ಆದರೆ ಇದನ್ನು ಮನೆಯಲ್ಲಿ ಹೇಳಲು ಅವಳಿಗೆ ಎದೆಗಾರಿಕೆ ಸಾಲದು. ಈ ಮರುಕುವನ್ನು ನಾಗುವಿನ ಮೂಲಕ ಅಕ್ಕನಿಗೆ ತಿಳಿಸುವಳು. ಒಂದು ಬಾರಿ ನಾಗು ಸಂಪಾಜೆಗೆ ಹೋಗುವಾಗ ಚಂದ್ರನಿಗೆಂದು ತಾನೇ ಹೆಣೆದು ತಯಾರಿಸಿದ್ದ ಉಲ್ಲನ್ ಅಂಗಿಯೊಂದನ್ನು ಕೊಟ್ಟು ಕಳುಹಿಸಿದಳು.

ಸಂಪಾಜೆಯಲ್ಲಿ ಚಂದ್ರನಿಗೆ ಅಂಗಿ ತೊಡಿಸುತ್ತಿದ್ದ ಚಂದ್ರಮ್ಮ ನಾಗುವಿನಲ್ಲಿ ಹೇಳುತಿದ್ದಳು

"ಸರಸುವೇ ಚಂದ್ರನ ತಾಯಿ ನಾಗೂ....ನಾನಲ್ಲ"—ಎಂದು.

o o o o o o

ಆ ದಿನ ರಾತ್ರಿ ಉಂಡು ಚಂದ್ರಮ್ಮ ತನ್ನ ಕೋಣೆಯಲ್ಲಿ ಕುಳಿತಿದ್ದಳು. ಸಣ್ಣ ಚಂದ್ರನು ತಾಯ ತೊಡೆಯಲ್ಲಿ ಅಂಬೆಗಾಲಿಕ್ಕಿ ಇಳಿಯುತಿದ್ದ–ಹತ್ತುತ್ತಿದ್ದ–ನಗುತಿದ್ದ. ಗೋಪಿ ಪುಟ್ಟು ಬಳಿಯಲ್ಲಿದ್ದು ಭಾವನನ್ನು ನಗಿಸುತಿದ್ದರು. ಮಕ್ಕಳ ಒತ್ತಾಯಕ್ಕೆ ಕಡೆಗೆ ಚಂದ್ರಮ್ಮನು ಕತೆ ಹೇಳಬೇಕಾಯಿತು. ಅತ್ತೆಯ ಕತೆಗೆ ಪುಟ್ಟನು ಹೂಂ.. ಗುಟ್ಟುತಿದ್ದನು. ಆದಾವುದೋ ವ್ಯಥೆಯಲ್ಲಿ ಕುಳಿತಿದ್ದ ಚಂದ್ರಮ್ಮನ ಬಾಯಿಯಿಂದ ಅಭ್ಯಾಸಬಲದಿಂದ ಕತೆ

ಬರುತಿತ್ತು ಲವಕುಶರ ಕತೆಯದು. ಕತೆ ಮುಂದುವರಿಯಿತು. ಲಕ್ಷ್ಮಣ, ಭರತ, ರಾಮ ಇವರನ್ನೆಲ್ಲಾ ಪಡೆಸಹಿತ ಕೆಡಹಿದ ಲವಕುಶರ ಶೌರ್ಯಕ್ಕೆ ಮಕ್ಕಳಿಬ್ಬರೂ 'ಶಹಭಾಸ್' ಎಂದು ಕೈತಟ್ಟಿ ಕುಣಿದರು. ಕತೆಯನ್ನು ಬೇಗನೆ ಮುಗಿಸಲು ಯೋಚಿಸುತಿದ್ದ ಚಂದ್ರಮ್ಮನು ಕೊನೆಗೆ-

"ಶ್ರೀರಾಮನು ಲವಕುಶರನ್ನು ಕೂಡಿಕೊಂಡು ಅಯೋಧ್ಯೆಗೆ ಹೋಗಿ ಸುಖವಾಗಿದ್ದನು"

ಎಂದು ಸಮಾಪ್ತಿ ಮಾಡಿದಳು. ಗೋಪಿ ತಟ್ಟನೆ ಅತ್ತೆಯಲ್ಲಿ ಕೇಳಿದಳು—

"ಹಾಗಾದರೆ ಸೀತೆ"

ಪುಟ್ಟುವೂ ಜತೆಗೆ ಪ್ರಶ್ನೆ ಹಾಕಿದನು

"ಸೀತೆಯನ್ನು ಜತೆಗೆ ಕರಕೊಂಡು ಹೋಗಿಲ್ವೇನತ್ತೆ ರಾಮ"

ಚಂದ್ರಮ್ಮ ಉದಾಸೀನದಿಂದಲೇ ಹೇಳಿದಳು

"ಇಲ್ಲ. ಭೂಮಿಯು ಅವಳನ್ನು ನುಂಗಿಬಿಟ್ಟಿತು. ಭೂಮಿಯು ಅವಳ ತಾಯಿಯಲ್ಲವೇ. ಅವಳು ತಾಯಿಯ ಮನೆಗೆ ಹೋದಳು"

ಗೋಪಿಯೆಂದಳು ನಿರಾಶಳಾಗಿ

"ಹಾಗಾದರೆ ರಾಮನಿಗೆ ಸೀತೆಯಿಲ್ಲ. ಸೀತೆಯಿಲ್ಲದಿದ್ದರೆ ಮಕ್ಕಳು ಸಿಕ್ಕಿದುವಲ್ಲಾ ಸಾಕು ರಾಮನಿಗೆ! ಪಾಪ. ಸೀತೆ!"

"ರಾಮನೂ ಪಾಪ ಅಲ್ಲವೇ ಅತ್ತೆ...."

ಪುಟ್ಟ ಉತ್ತರಿಸಿದ. ವಿವೇಕ ವಿಶಾರದನಂತೆ"

"ಎಂಥಾ ಪಾಪ! ಜೋರು....ಸೀತೆ ಸಿಕ್ಕಿದರೆ ಕಾಡಿಗೆ ಕೊಂಡು ಹೋಗಿ ಬಿಡುತಿದ್ದ"

ಅಣ್ಣ ತಂಗಿಯರಲ್ಲೇ ವಾಗ್ಯುದ್ಧಕ್ಕೆ ಆರಂಭವಾಗಲು ಚಂದ್ರಮ್ಮನು ಇಬ್ಬರನ್ನೂ ಸಂತೈಸಿದಳು.

"ಇಬ್ಬರೂ ಪಾಪ!" ಎಂದು.

ಮಕ್ಕಳಿಬ್ಬರೂ ಅವಳ ಹಾಸಿನಲ್ಲೆ ನಿದ್ದೆಹೋದರು. ಮಲಗಿದ ಚಂದ್ರಮ್ಮನಿಗೆ ಬಹಳ ಹೊತ್ತು ನಿದ್ದೆ ಬೀಳಲಿಲ್ಲ. ಬಹಳ ದಿನಗಳಿಂದ ನಿಶ್ಚಯಕ್ಕೆ

ಬರಬೇಕೆಂದಿದ್ದ ಆಕೆ ಇಂದು ಕೊನೆಯ ನಿರ್ಧಾರಕ್ಕೆ ಬರತೊಡಗಿದಳು. ತುಂಬಾ ಹೊತ್ತು ಮಹಾಸತಿ ಸೀತೆಯನ್ನು ಮನದೆದುರು ನಿಲ್ಲಿಸಿ ಯೋಚಿಸಿದಳು. ಎಷ್ಟೋ ಹೊತ್ತಿನ ಬಳಿಕ ಆವಳಿಂದ ತೃಪ್ತಿಯ ನಿಟ್ಟುಸಿರೊಂದು ಹೊರಬಿತ್ತು. ಕಳೆದ ದಿನಗಳಿಂದ ತುಂಬಿ ಬಂದಿದ್ದ ಬೇಸರವೆಲ್ಲವೂ ಅವಳ ಮನಸ್ಸಿನಿಂದ ಮಾಯವಾಯಿತು. ಹೃದಯವು ಹಗುರವಾಯಿತು. ತನ್ನ ಕಾರ್ಯವನ್ನೆಲ್ಲಾ ಮುಗಿಸಿ ತಾನೂ ಸೀತೆಯಂತಾಗುವೆನೆಂದು ಬಗೆದ ಆಕೆಗೆ ಬೆಳಗಿನ ಜಾವಕ್ಕಾದರೂ ಚೆನ್ನಾಗಿ ನಿದ್ದೆ ಹತ್ತಿತು.

ಗೋಪಿಯೇ ಬಂದು ಮರುದಿನ ಅತ್ತೆಯನ್ನು ಕಾಫಿಗೆ ಎಚ್ಚರಿಸಿದಳು. ಇದುವರೆಗೆ ತವರಲ್ಲಿ ಆಕೆ ತಡಮಾಡಿ ಎದ್ದವಳಲ್ಲ. ಆವಳತ್ತಿಗೆ ಕೇಳಿದಳು

"ಸುಖವಿಲ್ಲವೇ ಅತ್ತಿಗೆ"

"ಏನಿಲ್ಲ. ಚೆನ್ನಾಗಿಯೇ ಇದ್ದೇನೆ"

ನಗುತ್ತಾ ಚಂದ್ರಮ್ಮ ಉತ್ತರಿಸಿದಳು

ಕಾಫಿಯಾಯಿತು. ಉತ್ಸಾಹದಲ್ಲಿರುವ ಚಂದ್ರಮ್ಮ ಅತ್ತಿಗೆಯೊಡನೆ ಮಧ್ಯಾಹ್ನದ ಅಡುಗೆಗೆ ಸಹಾಯಕಳಾದಳು. ಬೇಗನೆ ಅಡುಗೆ ತಯಾರಾಯಿತು. ಮಕ್ಕಳನ್ನು ಎಣ್ಣೆ ತಿಕ್ಕಿ ಮಿಾಯಿಸಿದಳು. ತಾನೂ ಮಿಂದು ಅದುವರೆಗೆ ಬಾಚಿ ತಲೆಕಟ್ಟದಿದ್ದ ತಲೆಯನ್ನು ಬಾಚಿ ತುರುಬು ಕಟ್ಟಿದಳು. ಹೂಮಾಳೆ ಕಟ್ಟಿ ಗೋಪಿಗೆ ಅವಳ ತಾಯಿಗೆ ಮುಡಿಸಿ ತಾನೂ ಮುಡಿದುಕೊಂಡಳು. ಕನ್ನಡಿ ನೋಡಿ ಕುಂಕುಮವಿಟ್ಟು ತನ್ನ ರೂಪವನ್ನೊಮ್ಮೆ ಚೆನ್ನಾಗಿ ನೋಡಿಕೊಂಡಳು. ಬಹುಕಾಲದಿಂದ ತನ್ನ ರೂಪವನ್ನು ಕನ್ನಡಿಯಲ್ಲಿ ನೋಡದಿದ್ದ ಆಕೆಗೆ ತನ್ನ ಮುತ್ತೈದೆತನದ ರೂಪವನ್ನು ಕಂಡು ಮುಖದಲ್ಲಿ ಮುಗುಳುನಗೆಯೊಂದು ಮಿಂಚಿ ಮಾಯವಾಯಿತು.

ಮಧ್ಯಾಹ್ನದ ಊಟವಾಯಿತು. ಚಂದ್ರ ಹೊರಜಗಲಿಯಲ್ಲಿ ಮಾವನ ತೊಡೆಯಲ್ಲಾಡುತ್ತಿದ್ದನು. ಗೋಪಿ ಪುಟ್ಟು ಮಲಗಿ ನಿದ್ದೆಹೋಗಿದ್ದರು. ಚಂದ್ರಮ್ಮ ಹೊರಬಂದು ಚಂದ್ರನನ್ನೆತ್ತಿಕೊಂಡಳು. ಅಣ್ಣನ ಕಡೆಗೊಮ್ಮೆ ನೋಡಿ ಅತ್ತಿಗೆಯಲ್ಲೂ "ಕೆಳಮನೆಗೆ ಹೋಗಿ ಬರುವೆನೆಂದು" ಹೊರಟಳು. ಲಕ್ಷ್ಮಿಯು ತನ್ನ ಕೊರಳಲ್ಲಿದ್ದ ಕಾಡಿಗೆ ಡಬ್ಬಿಯಿಂದ ತುಸು ಕಾಡಿಗೆ ತೆಗೆದು ಚಂದ್ರನ ಹಣೆಗಿಟ್ಟಳು "ನಾಳೆ ಬೆಳಿಗ್ಗೆ ಕಾಫಿಗೆ ಬಾ.. ಚಂದ್ರ"

ಎಂದರು ಚಂದ್ರನ ಮಾವ. ತಾಯಿ ಮಕ್ಕಳಿಬ್ಬರೂ ಕೆಳಮನೆಗೆಂದು ಮನೆ ಯಿಳಿದರು.

ಕೆಳಮನೆಯು ಅಲ್ಲಿಗೆ ದೂರವಲ್ಲ. ಅರ್ಧ ಮೈಲೂ ಪೂರ್ಣವಿಲ್ಲ. ಅವರ ಜಾತಿಯವರ ಮನೆ. ದೂರದ ಸಂಬಂಧಿಕರೂ ಹೌದು. ಚಂದ್ರಮ್ಮ ಚಿಕ್ಕವಳಿರುವಾಗ ದಿನಕ್ಕೊಮ್ಮೆ ಅಲ್ಲಿಗೆ ಹೋಗಿ ಅಣ್ಣನೊಡನೆ ಬರುತಿದ್ದಳು. ಈಗಲೂ ಅವರು ದಿನಕ್ಕೊಮ್ಮೆ ಬಂದಾಗ ಆಗಾಗ ಚಂದ್ರಮ್ಮನನ್ನು ಬರಹೇಳು ತ್ತಾರೆ. ತವರಿಗೆ ಬಂದಂದಿನಿಂದ ಇದು ವರೆಗೂ ಹೋಗಲಾರದೆ ತಪ್ಪಿಸಿ ಕೊಳ್ಳುತಿದ್ದ ಅವಳಿಗೆ ಇಂದು ಅದೇ ನೆಪವು ಮನೆ ಹೊರಡಲು ಸಹಾಯಕ ವಾಯಿತು.

ಚಂದ್ರಮ್ಮನ ಈ ವರ್ತನೆಯು ಅವಳ ಅಣ್ಣ ಅತ್ತಿಗೆಯರಿಗೆ ಆಶ್ಚರ್ಯ ವನ್ನುಂಟುಮಾಡಲಿಲ್ಲ. ಎಷ್ಟು ದಿನ ಹೀಗೇ ಮನೆಯಲ್ಲೇ ಕುಳಿತು ಕಳೆ ದಾಳು... ? ನೆರೆಮನೆಗೆ ಹೋಗಿ ಬರುವಳೆಂದು ಅವರೂ ಬಗೆದಿದ್ದರು. ಕೆಳ ಮನೆಗೆ ತಮ್ಮ ತೋಟದಲ್ಲೇ ಇಳಿದು ಅವರ ತೋಟವನ್ನು ದಾಟಿ ಹೋಗುವು ದರಿಂದ ಜತೆಗೆ ಜನವೂ ಬೇಕಾಗಿರಲಿಲ್ಲ.

ಮಕ್ಕಳು ನಿದ್ದೆಯಿಂದೆದ್ದು ಕೇಳಿದರು.

"ಅತ್ತೆಯೆಲ್ಲಿ"

ಕೆಳಮನೆಗೆ ಹೋದರು ಎಂದ ತಾಯಿಯ ಮಾತನ್ನು ಅವರಿಬ್ಬರೂ ನಂಬಲಿಲ್ಲ. ಕೋಣೆಯಿಲ್ಲಿರಬಹುದೆಂದು ಗೋಪಿ ಹುಡುಕಾಡಿದಳು. ತೋಟಕ್ಕೆ ಹೋಗಿರಬಹುದೆಂದು ಪುಟ್ಟು ಕರೆದು ನಿರಾಶನಾದ. ಅತ್ತೆಯ ಸುಳಿವು ಸಿಕ್ಕದ ಮಕ್ಕಳು ಕಡೆಗೆಂದರು–

"ಅತ್ತೆ ನಮ್ಮನ್ನು ಬಿಟ್ಟೇ ಹೋದಳು...."

ಸಂಜೆಗೆ ಕೆಳಮನೆಗೆ ಕರಕೊಂಡು ಹೋಗುವೆನೆಂದು ಚಂದ್ರಮ್ಮ ಮಕ್ಕ ಳಿಗೆ ಮಾತುಕೊಟ್ಟಿದ್ದಳು. ಈ ಬಾರಿ ಅದನ್ನು ಸುಳ್ಳು ಮಾಡಿದ್ದಳು. ಹಾಗೆಯೇ ಮನೆಯವರೊಡನೆಯೂ ನಿಜವನ್ನು ಹೇಳಿರಲಿಲ್ಲ. ಅವಳು ಕೆಳ ಮನೆಗೆ ಹೊರಟಿರಲಿಲ್ಲ. ಅವಳ ಮನೆಗೇ ಹೊರಟಿದ್ದಳು. ಗುರಿಕಾರರ ಮನೆಗೆ ಬರುವಾಗ ಒಬ್ಬಳೇ ಬಂದಿದ್ದಳು ಹೋಗುವಾಗ ತಾಯ್ಮಕ್ಕಳಿಬ್ಬರು.

ಅವರಿಗೆ ಜತೆಗೆ ಯಾರೂ ಬೇಕಾಗಿರಲಿಲ್ಲ.

ಮಗುವನ್ನೆತ್ತಿಕೊಂಡು ತೋಟಕ್ಕಿಳಿದೊಡನೆಯೇ ತಿರುಗಾಟಕ್ಕೆ ಹೊರಡುವುದೆಂದು ಅನುಭವದಿಂದ ಮಗುವು ನಗುಮೊಗವಾಯಿತು. ಅದಕ್ಕೆ ನಿಜಕ್ಕೂ ಆನಂದ. ಚಂದ್ರಮ್ಮ ಚಂದ್ರನನ್ನು ಮುಖಕ್ಕೊತ್ತಿ ಹೇಳಿದಳು "ಚಂದ್ರಾ....ನಾವಿಂದು ಮನೆಗೆ ಹೋಗುವೆವು. ಇದು ನಿನ್ನ ಮನೆಯಲ್ಲ ಚಂದ್ರಾ ...ನಿನ್ನ ಮನೆಯಲ್ಲಿದೆ. ಅಲ್ಲಿ ನಿನಗೆ ಅಪ್ಪ ಅಜ್ಜಯಿದ್ದಾರೆ. ನನ್ನಂತೆ ಚಿಕ್ಕಮ್ಮನಿದ್ದಾಳೆ." ಅದಕ್ಕೇನು ಅರಿವಾಗುತ್ತದೆ. ತಾಯಿಯ ಮರುಕದ ಮಾತು! ಆದರೂ ನಿನ್ನನ್ನು ಬಿಡೆನೆಂದು ಅವಳ ತಲೆಗೂದಲನ್ನು ಪುಟ್ಟ ಕೈಗಳಿಂದ ಹಿಡಿದೆಳೆಯಿತು. ಅದೇ ಕೈಗಳನ್ನು ಚಂದ್ರಮ್ಮ ಮುದ್ದಿಸಿದಳು.

o o o o o o

ತಾಯಿಮಕ್ಕಳಿಬ್ಬರೂ ಊರಿಗೆ ಸೇರುವಾಗ ಸಂಜೆಯಾಗಿತ್ತು. ಅವಳು ಎಣಿಸಿದುದಕ್ಕೆ ಸಮಯ ಸಹಾಯವಾಗಿತು. ಗುರಿಕಾರರು ಆ ದಿನ ಪುತ್ತೂರಿಗೆ ಹೋಗಿದ್ದರಂತೆ. ಕಾವೇರಮ್ಮನೂ ತೋಟದಲ್ಲಿರುವ ಸಮಯವದು. ಚಂದ್ರಮ್ಮ ಇಂದು ನೇರಾಗಿ ನಾಗು ಮನೆಯಂಗಳವಾಗಿ ಬರಲಿಲ್ಲ. ತುಸು ಅಡ್ಡದಾರಿಯಿಂದ ಅವಳ ಕಣ್ಣು ತಪ್ಪಿಸಿ ಮುಂದಾದಳು. ಮನೆಯು ಸಮೀಪಿಸಿದಂತೆಯೇ ಅವಳ ಮನೋವೇದನೆ ಏರಿ ಬರುತಿತ್ತು. ಒಂದೆರಡು ವರುಷಗಳಿಂದೀಚೆಗೆ ತಾನು ಕಾಣದ ಬಯಲು, ತೋಟ, ಗದ್ದೆ, ತೋಪುಗಳಿಂದೂ ಅವಳಿಗೆ ಪರಿಚಿತರಂತೆ ಕಣ್ಣೆದುರಿಗೆ ಅಡ್ಡಾದುವು. ಅಬ್ಬಿಯೊಂದು ಭೋರ್ಗರೆಯುತಿತ್ತು ಧೋ....ಎಂದು. ಅಗಲಿದ ಚಿರಪರಿಚಿತೆಯನ್ನು ಮರಳಿ ಕಾಣುವ ಹೆಬ್ಬಯಕೆಯ ದನಿಯಂತೆ.

ಅಂಗಳವೇರುವ ಮೊದಲು ಚಂದ್ರಮ್ಮ ತಾನು ಬೆಳೆಸಿದ್ದ ಹೂವಿನ ತೋಟವನ್ನು ನೋಡಿದಳು. ಅದು ಪರಿಚಿತವಾಗಿ ಬಣ್ಣ ಬದಲಿಸಿತ್ತು. ತಾನು ಬೆಳೆಸಿದ್ದ ಹೂ ಗಿಡಗಳನ್ನೆಲ್ಲಾ ಅವಳಿಂದು ಕಾಣಲಿಲ್ಲ. ಅಂದು ನಿತ್ಯ ಹೂಬಿಡುವ ಅವಳ ಕೈನೀರಿನಿಂದ ಬೆಳೆದ ಗಿಡಗಳು ಅಲ್ಲಿರಲಿಲ್ಲ ಬದಲು ಹೊಸ ಬಗೆಯ 'ಕ್ರೋಟನ್' ಗೆಲ್ಲುಗಳು ಕಸಿ ಗುಲಾಬಿಗಳು ಅಲ್ಲಿ ತೂಗುತಿದ್ದುವು. ನಿಟ್ಟುಸಿರಿಡುವ ತಾಯಿಯಲ್ಲಿ ಒಂದು ಹೂವಿಗಾಗಿ ಮಗುವು ಕೈ

ನೀಡಿತು. ಹೂ ಕೊಯ್ಯಿದು ಕೊಡಲು ಚಂದ್ರಮ್ಮನಿಗಾಗಲಿಲ್ಲ. ತೋಟ ತನ್ನದಲ್ಲವೆಂಬ ಅನುಭವವು ಆಕೆಯನ್ನು ಕೆಣಕುತಿತ್ತು.

ಎಷ್ಟು ಹೊತ್ತು ಮಗುವನ್ನೆತ್ತಿ ಅವಳಲ್ಲಿ ನಿಂತಿದ್ದಳೋ....? ಅವಳಿಗೇ ತಿಳಿಯದಾಗಿತ್ತು. ಹೊತ್ತು ಕಂತುವುದರಲ್ಲಿತ್ತು. ಎಚ್ಚತ್ತ ಚಂದ್ರಮ್ಮ ಮಗುವನ್ನೆತ್ತಿ ಅದರ ಮುಂಗುರುಳುಗಳನ್ನು ತೀಡಿ ಮುದ್ದಿಸಿದಳು. ಮುಂದೆ ಏನೇನೋ ತನ್ನ ಬಯಕೆಯನ್ನು ಮಗುವಿನಲ್ಲಿ ಹೇಳಲು ಹೊರಟ ಅವಳ ತಾಯ್ತನದ ಬಾಯಿಯು ಬಾರದಾಯಿತು. ಮುತ್ತಿನ ಸುರಿಮಳೆಯಿಂದಲೇ ತನ್ನ ಹೃದಯದ ಕಾತರತೆಯನ್ನು ಮುಗಿಸಿದಳು. ಸೆರಗಿನಿಂದ ಕಣ್ಣೀರು ಒರಸಿಕೊಂಡೇ ಮನೆಯಂಗಳವನ್ನು ಹತ್ತಿದಳು.

ಬೌ! ವೌ!

ಬೆಳ್ಳಿ ನಾಯಿಯೊಮ್ಮೆ ಬೊಗಳಿ ಜಗಲಿಯಿಂದ ಹಾರಿ ಅಂಗಳಕ್ಕೆ ಬಂದಿತು. ಹತ್ತಿರವಾಗುತ್ತಲೇ ಅದರ ಆನಂದಕ್ಕೆ ಪಾರವಿಲ್ಲ. ತನ್ನ ಒಡತಿಯ ಸುತ್ತುಮುತ್ತು ಬಾಲ ಬೀಸುತ್ತಾ ಇಷ್ಟು ದಿನವೆಲ್ಲಿ ಹೋಗಿರುವೆಯೆಂದು ತನ್ನ ಮೂಕ ಮರ್ಮರ ದನಿತೆಗೆದು ಕೇಳಿತು. ಹಟ್ಟಿಯಲ್ಲಿ ಕರೆದು ಕಟ್ಟಿದ ಗೋಪಿಯು ಇವಳದನ್ನು ನೋಡದಿದ್ದರೂ 'ಅಂಬಾ' ಎಂದು ಕರೆಯಿತು. ಚಂದ್ರಮ್ಮ ಗೋಪಿಯ ಕಡೆಗೆ ನೋಡಿದಳು. ಅದು ತನ್ನ ಮೂರನೇ ಕರುವಿಗೆ ಮೊಲೆಯುಣಿಸುತಿತ್ತು.

ಭಾರವಾದ ಹೆಜ್ಜೆಯಿಟ್ಟು ಚಂದ್ರಮ್ಮ ಗುರಿಕಾರರ ಮನೆ ಹತ್ತಿದಳು. ಜಗಲಿಯಲ್ಲಿ ಯಾರೂ ಇರಲಿಲ್ಲ. ಅಪರಿಚಿತಳಂತೆ ಜಗಲಿಯ ಪಕ್ಕದಲ್ಲೆ ಕುಳಿತಳು. ಗೋಡೆಯಲ್ಲಿ ತೂಗಹಾಕಿದ ಪಟವೊಂದು ಇವಳ ಕಣ್ಸೆಳೆಯುತಿತ್ತು. ಅದು ಸರಸುವಿನದೆಂದು ಅವಳ ಮನಸ್ಸಾಕ್ಷಿ ನುಡಿಯುತಿತ್ತು.

ಹತ್ತು ನಿಮಿಷಗಳ ನಂತರ ಸಂಜೆಯ ಹಾಲು ಕಾಯಿಸುತ್ತ ಒಳಗಿದ್ದ ಸರಸು ನಾಯಿ ಬೊಗಳಿದ ದನಿಗೆ ಹೊರಗೊಮ್ಮೆ ಬಂದು ಇಣಿಕಿದಳು. ಚಂದ್ರಮ್ಮನೂ ಇವಳನ್ನು ಮೂಕಿಯಂತೆ ನೋಡುತ್ತಿದ್ದಳು. ಪಪ್ರತಿಯಂತೆ ಸರಸು ಕೇಳಿದಳು

"ಕುಡಿಯಲು ಬೇಕೆ...."

ಹೌದೆಂದು ತಲೆಯಾಡಿಸಿದಳು ಚಂದ್ರಮ್ಮ. ತನಗರಿಯದ ಸಂಬಂಧಿಕರಿರಬಹುದು ಎಂದು ನೆನಸಿದ ಸರಸು ಒಳಗೆ ಹೋಗಿ ಮಜ್ಜಿಗೆಲೋಟ ತಂದು ಕೈಗಿತ್ತಳು. ಚಂದ್ರಮ್ಮ ಇಳಿಯದ ತನ್ನ ಗಂಟಲಿಗೆ ಅದನ್ನು ಹೊಯ್ದು ಉಳಿದುದನ್ನು ಮಗುವಿನ ಬಾಯಿಗಿಟ್ಟಳು. ಮಗುವನ್ನು ಎವೆಯಿಕ್ಕದೆ ನೋಡುತಿದ್ದ ಸರಸು ತಡೆದು ಹೇಳಿದಳು.

"ಬೇಡಮ್ಮ ಮಗುವಿಗೆ ಮಜ್ಜಿಗೆ ಶೀತವಾದೀತು. ಹಾಲುತರ್ತೇನೆ." ಎನ್ನುತ್ತಾ ಒಳಹೋದಳು. ಚಂದ್ರಮ್ಮ ಒಳನಡೆದ ತಂಗಿಯನ್ನು ನೋಡಿ ಇದೇ ತನಗೊದಗಿ ಬಂದ ಸಮಯವೆಂದು ಚಂದ್ರನನ್ನೊಮ್ಮೆ ಎತ್ತಿ ಕಿವಿಯಲ್ಲಂದಳು "ಅಳಬೇಡ ಚಂದ್ರ.... ಚಿಕ್ಕಮ್ಮ ಹಾಲು ತರ್ತಾಳೆ .. ಸುಖವಾಗಿರು"– ಎಂದು ಒತ್ತಿಬರುವ ದುಃಖವನ್ನು ಕಟ್ಟಿ ಮೊಟ್ಟೆಯಲ್ಲಿದ್ದ ಕಾಗದ ಚೂರೊಂದನ್ನು ಮಗುವಿನ ಕೈಗಿತ್ತು ನೆಲದಲ್ಲಿ ಬಿಟ್ಟಿದ್ದಳು. ಮಗುವನ್ನು ಬಿಟ್ಟು ಹೋಗಲಾರದ ಅವಳನ್ನು ಅದಾವುದೋ ಒಂದು ಶಕ್ತಿಯು ಸೆಳವು ಎಳೆದೊಯ್ಯುತಿತ್ತು. ರಭಸದಿಂದ ಅಂಗಳಕ್ಕಿಳಿದು ಅದನ್ನು ದಾಟುವುದರಲ್ಲಿದ್ದಳು. ಬೆಳ್ಳಿ ನಾಯಿಯು ಅಂಗಳದ ತುದಿಯ ವರೆಗೆ ಅವಳ ಹಿಂದೆಯೇ ಕುಯಿಂಗುಡುತ್ತಾ ಹೋಯಿತು. ಕಟ್ಟಿದ ಗೋಪಿಯು ಕರುವನ್ನು ನೆಕ್ಕುವುದನ್ನು ಮರೆತು ಕಣ್ಣೀರು ತುಂಬಿ ಚಂದ್ರಮ್ಮ ಮರೆಯಾಗುವ ವರೆಗೂ ನೋಡುತಿತ್ತು. ಚಂದ್ರನೊಮ್ಮೆ ಜಗಲಿಯಿಂದ ತಾಯಿಯು ಹೋಗುತ್ತಿರುವುದನ್ನು ನೋಡಿ ಚಿಟ್ಟನೆ ಚೀರಿದ. ಇದಾವುದಕ್ಕೂ ಚಂದ್ರಮ್ಮನಿಗೆ ತಿರುಗಿ ನೋಡುವುದಕ್ಕಾಗಲಿಲ್ಲ. ಅವಳ ಕಣ್ಣು ಕುರುಡಾಗಿತ್ತು. ಕಿವಿ ಕಿವುಡಾಗಿತ್ತು. ಮೂಕಿಯಂತೆ ಮುನ್ನಡೆಯುವ ಚಂದ್ರಮ್ಮನನ್ನು ದೂರದ ಅಬ್ಬಿ ಕರೆಯುತಿತ್ತು. ಧೋ...... ಎಂದು.

ತಟ್ಟೆಯಲ್ಲಿ ಸಕ್ಕರೆ ಬೆರಸಿದ ಹಾಲನ್ನು ಸರಸು ಹೊರತಂದಳು. ಮಗುವೊಂದೇ ಜಗಲಿಯಲ್ಲಿ ಹೊರಳಿ ಕೂಗುತಿತ್ತು. ಅವಳೆಲ್ಲಿ? ಎಂಬ ಗಾಬರಿಯಲ್ಲಿ ಸರಸು ಬಳಿಗೋದಳು. ಮಗುವನ್ನೆತ್ತಿಕೊಂಡಳು. ಚಂದ್ರನೊಮ್ಮೆಗೆ ಸರಸುವಿನ ಕೈಯಲ್ಲಿ ಸುಮ್ಮನಾದ. ಮುದ್ದು ಮುದ್ದಾದ ಮಗುವನ್ನೊಮ್ಮೆ ಮುದ್ದಿಸಬೇಕೆಂದಾಯಿತು ಅವಳಿಗೆ. ಅವಳೆಲ್ಲಿ ಹೋದಳು ಎಂಬ ಅನುಮಾನದಲ್ಲಿ ಎತ್ತಿಕೊಂಡಿದ್ದ ಮಗುವಿನ ಹಾಲುಗೆನ್ನೆಗೆ ತುಟಿ ತಾಗಿಸಿದಳು ಸರಸು.

"ಚಂದ್ರಾ....!" ಹೌದು! ಸರಸು ಚಂದ್ರನನ್ನು ಗುರುತಿಸಲು ಕಷ್ಟವಾಗಲಿಲ್ಲ. ತಾನೇ ಚಂದ್ರನಿಗಾಗಿ ನಾಗುವಿನಲ್ಲಿ ಹೆಣೆದು ಕೊಟ್ಟ ಅಂಗಿಯಿದು. ಹೌದು ಚಂದ್ರ! "ಚಂದ್ರಾ...." ಎಂದು ಅಪ್ಪಿ ಮುದ್ದಿಡುವ ಚಿಕ್ಕಮ್ಮನ ಬಾಯಿಗೆ ಚಂದ್ರ ಕಾಗದದ ಸುರುಳಿಯನ್ನು ತನ್ನ ಪುಟ್ಟ ಕೈಗಳಿಂದಿತ್ತ. ಸರಸುವದನ್ನು ಬಿಡಿಸಿ ನೋಡಿದಳು. ಚಂದ್ರಮ್ಮನೇ ಸರಸುವಿಗೇ ಬರೆದಿದ್ದಳು

.......ತಂಗಿ ಸರಸೂ ...... ಇದು ನಿನ್ನ ಮಗು. ಚಂದ್ರನಿನ್ನು ನಿನ್ನ ಮಗ. ಹೆತ್ತುದಷ್ಟೇ ನಾನು. ನಿನ್ನ ಅಕ್ಕ ಹಡೆದೂ ಬಂಜೆ. ನೀನೇ ಮಗುವಿನ ತಾಯಿ. ನೀನೆ ಹಾಲು ಕುಡಿಸು ತಂಗೀ . ....

ಓದಿ ಮುಗಿಸಿದ ಸರಸು ಚಂದ್ರನನ್ನು ಕಂಕುಳಲ್ಲೆ ಇರಿಸಿ, ಗಾಬರಿಯಿಂದ ಅಂಗಳ ತುದಿಯ ತನಕವೂ ಓಡಿ ನೋಡಿದಳು. ಅಕ್ಕನಿರಲಿಲ್ಲ. ಕರೆದಳು ದನಿಮಾಡಿ "ಅಕ್ಕಾ ......."

ತೋಟದಿಂದ ಕಾವೇರಮ್ಮ ಮನೆಗೆ ಬರುವುದರಲ್ಲಿದ್ದರು. ಅಂಗಳ ಹತ್ತುತಿದ್ದ ಅವರು ಕೇಳಿದರು

"ಯಾರೇ ಅಕ್ಕಾ...."

ಸರಸುವಿಗೆ ಉತ್ತರಿಸಲಾಗಲಿಲ್ಲ. ಚಂದ್ರ ಮಾತ್ರ ತನ್ನ ತಾಯಿ ಹೋದ ಕಡೆಗೆ ಬೊಟ್ಟು ಮಾಡಿ ತೋರಿಸುತಿದ್ದ. ಚಂದ್ರನನ್ನು ನೋಡಿದ ಕಾವೇರಮ್ಮ ಬಳಿಗೆ ಬಂದು

"ಚಂದ್ರ ಬಂದಳೆ ಸರಸೂ...."

ಎಂದು ಮೊಮ್ಮಗನೆಂಬ ಸಂಶಯದಿಂದ ಮಗುವಿನ ಕಡೆಗೆ ಕೈನೀಡಿದರು. ಯಾರ ಕೈಗೂ ಹಾರುವ ಚಾಪಲ್ಯದ ಮೊದ್ದು ಚಂದ್ರನು ಅಜ್ಜಿಯ ಕೈಯನ್ನೂ ಕ್ಷಣದಲ್ಲಿ ಸೇರಿದನು. ಕಾವೇರಮ್ಮನು ಮೊಮ್ಮಗನನ್ನು ಹಿಡಿದು ಅಪ್ಪಿಬಿಟ್ಟರು. ಚಂದ್ರನು ತನ್ನ ತನ್ನ ಪುಟ್ಟ ಕೈಗಳಿಂದ ಅಜ್ಜಿಯ ಕೆನ್ನೆಗೆ ಬಡಿದ. ಅವರ ಬಿಳಿಗೂದಲನ್ನೆಳೆದನು. ಮಗುವನ್ನು ಮುದ್ದಿಡುವ ಮುರುಕೆ ಕಾವೇರಮ್ಮನ ಕಣ್ಣಿನಲ್ಲೂ ಒಂದೆರಡು ತಟುಕು ಕಣ್ಣೀರಿಳಿದು ಹೋಯಿತು. ಸರಸು ಮತ್ತೂ ಆಶೆಯಿಂದ ಕರೆಯುತಿದ್ದಳು "ಅಕ್ಕಾ . ...."

ಉತ್ತರಸಿಗದೆ ನಿರಾಶಳಾದ ಸರಸುವಿನಲ್ಲಿ ಕಾವೇರಮ್ಮ ಹೇಳಿದರು

"ಸುಮ್ಮನಿರು ಸರಸು! ಸಂಪಾಜೆಗೇ ತಿರುಗಿ ಹೋಗಿರಬೇಕು. ತನ್ನ ಷ್ಟಕ್ಕೇ ಬರ್ತಾಳೆ. ಆದರೆ ಸರಸುವಿನ ಮನಸ್ಸು ಹೇಳುತಿತ್ತು "ಅಕ್ಕ ಇನ್ನು ಬರಲಾರಳು..." ಎಂದು.

ರಾತ್ರಿಯಿಡೀ ಚಂದ್ರ ತಾಯಿಯ ನೆನಪಾದಾಗ ಅಳದಿರುತ್ತಿರಲಿಲ್ಲ. ಸರಸು ಕಾವೇರಮ್ಮನವರೂ ಮಗುವಿನೊಡನೆ ರಾತ್ರಿಯಿಡೀ ನಿದ್ರಿಸಲಿಲ್ಲ. ಸರಸು ಚಂದ್ರನಿಗೆ ಹಾಲು ಕೂಡಿಸುತಿದ್ದಳು. ಅವನ ಕೂಗು ನಿಲ್ಲಿಸಲು ಹೇಳುತಿದ್ದಳು. ರಾತ್ರಿಯಿಡೀ ಅಬ್ಬಿ ಧೋ... ಎಂದು ಮೊರೆಯುತಿತ್ತು ಆದರ ರೋದನಕ್ಕೆ ಸರಸು ಚಂದ್ರನನ್ನು ಸಂತೈಸುತಿದ್ದಳು. "ಅಳಬೇಡ ಚಂದ್ರ....ಅಮ್ಮ ಬರ್ತಾಳೆ,...ನಾಳೆ ಬರ್ತಾಳೆ " ಎಂದು.

ಮರುದಿನ ಪುತ್ತೂರಿನಿಂದ ಬಂದ ಗುರಿಕಾರರು ಮನೆಗೆ ಬಂದರು. ಗಂಡನು ಮನೆಮೆಟ್ಟು ಹತ್ತುವಾಗಲೇ ಸರಸು ಚಂದ್ರನನ್ನು ಎತ್ತಿಕೊಂಡು ಬಾಗಿಲಲ್ಲೆ ನಿಂತಿದ್ದಳು. ಚಂದ್ರನನ್ನು ನೋಡಿದ ಗುರಿಕಾರರಿಗೆ ಚಂದ್ರಮ್ಮನ ರೂಪವೇ ಒಮ್ಮೆ ಸರಸುವಿನಲ್ಲಿ ಹರಿದಂತಾಯಿತು. "ಚಂದ್ರಾ..." ಎಂದು ವ್ಯೈಮರೆತ ಗುರಿಕಾರರ ದನಿಗೆ ಸರಸು ಉತ್ತರಿಸಲಿಲ್ಲ. ಕೈನೀಡಿದ ತಂದೆಯ ಕೈಗೆ ಚಂದ್ರ ಹಾರಿದ. ಅಲ್ಲೇ ಸರಸು ಚಂದ್ರನನ್ನೊಮ್ಮೆ ನಗಿಸಿದಳು. ಗುರಿಕಾರರ ಪ್ರತಿರೂಪವೇ ಆದಾಗಿತ್ತು.

ಚಂದ್ರಮ್ಮನ ವಿಚಾರ ತಿಳಿದ ಗುರಿಕಾರರು ಮಗನನ್ನು ಮುದ್ದಿಸುತ್ತಲೇ ಅಲ್ಲೆ "ಅಯ್ಯೋ.... ಚಂದ್ರಾ" ಎಂದು ಮುಗ್ಗರಿಸಿ ಹೋದರು. ತಂದೆಯ ಕೆನ್ನೆಗೆ ಚಂದ್ರ ತನ್ನ ಪುಟ್ಟ ಕೈಗಳಿಂದ ಎರಡೇಟು ಬಾರಿಸಿದ. ಅದೇ ಕೈಗಳ ನ್ನೆತ್ತಿ ಮುದ್ದಿಸಿದರು ಗುರಿಕಾರರು. ಕಾವೇರಮ್ಮನ ಸೂಚನೆಯಂತೆ ಉಟ್ಟ ಉಡಿಗೆಯಲ್ಲೇ ಸಂಪಾಜೆಗೆಂದು ಹೊರಟರು. ಚಂದ್ರಮ್ಮನನ್ನು ಕರೆದೇ ತರಬೇಕೆಂದು,

o o o o o o

ಅಬ್ಬಿಯ ಮಡಿಲು........

ಮಧ್ಯಾಹ್ನದ ಬಿರಿಬಿಸಿಲಿನ ಝಳಕ್ಕೂ ತನ್ನೂರನ್ನು ತನ್ನ ತೂಗುದೊಟ್ಟಿಲ

ಲ್ಲಿಟ್ಟು ತೂಗುತ್ತಿತ್ತು ರಾಗ ಬಹುದೂರಕ್ಕೆ ಕೇಳಿಬರುತ್ತಿತು.

ಧೋೞ ........

ಮಡಿಲಿನೊಡಲಲ್ಲಿ.........

ಧಡ್-ಧಡಾಲ್ ... ಭಟ್-ಭಟಾಲ್ ... ಭಟ್-ಭಟಾಲ್.... ಧಡ್-ಧಡಾಲ್.... ಭಟ್-ಭಟಾಲ್... ಧಡ್-ದಡಾಲ್.......

ತೊರೆಯೊಡೆದು ಹೊನಲು ಸೀಳುಗಳಾಗಿ .....ಉರುಳಿ ನೊರೆನೊರೆಯಾಗಿ....ಉಕ್ಕೆರುತ್ತಿತ್ತು.

ಈ ಮಹಾಶಬ್ಧದಲ್ಲೂ ನಿಶ್ಯಬ್ಧ! ಸುಡುವ ಬಿಸಿಲಿನಲ್ಲೂ ತಂಪು! ಅಬ್ಬಿಯ ಮಡಿಲಲ್ಲಿತ್ತು.

ಗಿಜಿಲ್....ಗಿಜಿಕ್-ಗಿಜಿಲ್....ಗಿಜಿಕ್-ಗಿಜಿಲ್........

ಬಟ್ಟೆಯಿನ್ನೂ ಮಡಿಯಾಗಿಲ್ಲವೆಂದು ಕೈಬಳೆಗಳು ಕರೆಕರೆದು ಹೇಳುತಿದ್ದುವು

"ವೆಂಕಮ್ಮಾ-ಹೋಗಿದ್ರೆನಮ್ಮಾ....ಗುರಿಕಾರ್ರ ಮನೆಗೆ"

"ಯಾರ ಹಾಗಿದೆ ಕನಕಕ್ಕ....ಮಗು ..."

"ಗುರಿಕಾರ್ರು ನಿನ್ನೆ ಸಂಪಾಜೆಗೆ ಹೋಗಿದ್ರಂತಲ್ಲಾ ರತ್ನಕ್ಕಾ"

"ಹೋದೋರು ಹೋದಂತೆ ಬಂದಿರ್ತಾರೆ ಕಮಲಾ"

"ಆದ್ರೆ ಚಂದ್ರಕ್ಕನ ಸುದ್ದಿ"

"ಅವ್ಳು ಸಂಪಾಜೆಗೂ ಹೋಗಿಲ್ವಂತೆ...."

"ಹ್ಣಾಂ"

ಅಬ್ಬಯಯಾಚೆಯ ದಂಡೆಯಲ್ಲಿ ಮಧ್ಯಾಹ್ನದ ಬಸ್ಸು ಹಾರ್ನ್ ಹೊಡೆದು ಧೂಳೆಬ್ಬಿಸಿ ಅಬ್ಬಿಯವರಿಗೂ ತಿಳಿಸಿ ಹಾದುಹೋಯಿತು ಕೈಬಳೆಗಳು ಒಮ್ಮೆಗೇ....ಚುರುಕಾಗಿ ಶಾಂತವಾದುವು.

ಯಾರಿದ್ದರೂ ಹೆಚ್ಚಲ್ಲ. ಇಲ್ಲದಿದ್ದರೂ ಕಡಿಮೆಯಿಲ್ಲ. ಅಬ್ಬಿಯು ಇಂದು ನಿನ್ನೆಯದಲ್ಲ. ಎಂದಿನಂತೆ ಅಂದೂ ಒಂದೇ ಸವನೆ ಧುಮುಕುತಿತ್ತು.

ಧಡ್-ಧಡಾಲ್...ಭಟ್-ಭಟಾಲ್....ಧಡ್-ಧಡಾಲ್

ಬಿಸಿಲಿನ ಝುಳಕ್ಕೆ ನೀರು ಕನ್ನಡಿಯಂತೆ ಹೊಳೆ ಹೊಳೆಯುತಿತ್ತು. ಕದ್ದು ಬೀಸುವ ಗಾಳಿ ಆಕಾಶದಲ್ಲಿ ಮೋಡವನ್ನಾಡಿಸುತಿತ್ತು. ಹೊಲದಲ್ಲಿ ತೆಂಗು ತಲೆದೂಗಿ—ಬಾಳೆ ತೋಳುಬಿಸಿ–ಕಂಗು ಗರಿಯಾಡಿಸಿ–ಪೈರು ನಳ ನಳಿಸುತಿತ್ತು, ಅಬ್ಬಿ ದನಿಮಾಡುತಿತ್ತು

ಛಟ್—ಛಟಾಲ್ ...... ಧಡ್—ಧಡಾಲ್....

ಧಡ್—ಧಡಾಲ್... ಛಟ್—ಛಟಾಲ್....

ಬಹುದೂರಕ್ಕೆ ಅಬ್ಬಿ ಮಡಿಲು ದನಿಗೇಳುತಿತ್ತು....ಒಂದೇ ಮುಗಿಯುದ ಒಂದೇ ರಾಗ ...ಒಂದೇ ಧಾಟಿಯಲ್ಲಿ..

ಧೋೀೀ....... ....



# ಬೇಡವಾದ ಊರು



ಅದೋ!

ಝಿರ್ರೋ, ಝಿರ್ ಝಿರ್ರೋ,—ಬಂಟಮಲೆಯ ಗಿರಿಶೃಂಗದಿಂದ ಉರುಳಿ ಧುಮುಕುತ್ತಿರುವ ಆ ಅಬ್ಬಿಯ ಸದ್ದು ಕಿವಿಗಿಂಪಾಗಿ ದೂರದಿಂದ ಕೇಳುತ್ತಿದೆ. ಅದರ ನೀರಿನಾಶ್ರಯವನ್ನು ಪಡೆದ ತೆಂಗು ಕಂಗುಗಳು ಹಸನಾಗಿ ಬೆಳೆದು ನಿಂತಿವೆ ಫಲಭರಿತವಾದ ಅವು ತಂಗಾಳಿಗೊಲೆಯುತ್ತ ತಲೆದೂಗಿ ಕರೆಯುತ್ತಿವೆ. ಕಾಡುಮರಗಳು ಭೀಮಾಕೃತಿಯಿಂದ ಎದ್ದುನಿಂತಿವೆ! ಖಗ ಮೃಗಗಳ ಕೂಗು ವನದೇವಿಯ ಗೊಣಗುಟ್ಟುವಿಕೆಯಂತಿದೆ!

ಅಲ್ಲಿಯೇ ಸ್ವಲ್ಪ ದೂರದಲ್ಲಿ ಆ ಪ್ರಕೃತಿಸೌಂದರ್ಯದ ಸವಿಯನ್ನುಣ್ಣುವವರ ವಿಹಾರ ಸ್ಥಳ. ಆ ಊರಿನ ಒಂದು ಕೇಂದ್ರ. ಅವರಿಗೆಲ್ಲ ಅದೊಂದು ಸಣ್ಣ ಪೇಟೆ. ಅಲ್ಲಿರುವ ಅಂಗಡಿ-ಹೋಟೆಲುಗಳು ಲೆಕ್ಕಕ್ಕೆ ನಾಲ್ಕೇ. ಉರಿಮಜಲು ಗೋವಿಂದ ಭಟ್ಟರ 'ಶಿವಾನಂದ ಭವನ' ಕಾಫಿ ಕ್ಲಬ್, ಬಚ್ಚಲುಮನೆ ಲಚ್ಚಣ್ಣನ 'ಹೋಟೇಲಂಗಡಿ'. ನಾರಾಯಣ ಭಟ್ಟರ 'ಕೆಫೆ', ಸಹಕಾರಿ ಕಟ್ಟಡ—ಇವಿಷ್ಟು ಆ ಪೇಟೆಯ ವಾತಾವರಣ. ಬಳಿಯಲ್ಲೇ ಪಂಚಾಯತ್ ಬೋರ್ಡ್ ಶಾಲೆ ಪೇಟೆಗೊಂದು ಕಳೆಯೇರಿಸಿದೆ. ಮಾರ್ಗದ ಬದಿಯಲ್ಲೊಂದು ದೀಪ ರಾತ್ರಿಯಲ್ಲಿ ಉರಿಯುತ್ತಿರುತ್ತದೆ. ದೊಡ್ಡ ರಸ್ತೆಗೆ ಅಲ್ಲಿಂದ ಹೋಗುವ-ಬರುವ ಗಾಡಿಗಳಿಗೇನೂ ಕಡಮೆಯಿಲ್ಲ.

ಅಲ್ಲೊಂದು ಕಟ್ಟೆ. ಅದಕ್ಕೆ ಆ ಊರಲ್ಲಿ ಬಹಳ ಮಹತ್ವ. ಜಗಳವಾದರೆ ತೀರ್ಪು ಕೊಡುವ ನ್ಯಾಯಾಧೀಶರು ಅಲ್ಲಿಯೇ ಕುಳಿತುಕೊಳ್ಳಬೇಕು. ಆ ಕಟ್ಟೆಯಲ್ಲಿ ಕುಳಿತ ಯಾವ ನ್ಯಾಯಾಧೀಶನೂ ಅನ್ಯಾಯದ ತೀರ್ಪನ್ನೀಯಲಾರ ಎಂಬುದು ಜನರ ನಂಬಿಕೆ ಅದಕ್ಕವರು ಏನೇನೋ ಪೂರ್ವಕಥೆ ಹೇಳುವುದುಂಟು. ಆ ಕಟ್ಟೆಯಲ್ಲಿ ನಿಂತು ಪ್ರಮಾಣ ಮಾಡುವುದೆಂದರೆ ಎಂಟೆದೆಯ ಸತ್ಯವಂತನಿಗೆ ಮಾತ್ರ ಸಾಧ್ಯ. ಹಾಗಾಗಿ ಯಾವ ನ್ಯಾಯವೇ ಇರಲಿ ಆ ಕಟ್ಟೆಯ ಬಳಿ ತೀರಿಯೇ ತೀರುತ್ತದೆ.

ಆದರೆ ಆಧುನಿಕ ನಾಗರಿಕತೆಯ ಗಾಳಿ ತಾಗಿದ ಅಲ್ಲಿ ಕಟ್ಟೆಗೆ ಈಗ ದೇಗುಲದ ಪಾವಿತ್ರ್ಯವಿಲ್ಲದಿದ್ದರೂ ಜನತೆಯ ಆಶ್ರಯದ ಮಹತ್ವವಿದೆ. ಬಂದ ಆಫೀಸರರು ಅಲ್ಲಿಯೇ ತಮ್ಮ 'ಕೇಂಪ್' ಮಾಡುತ್ತಾರೆ. ಸಾಯಂಕಾಲ ಊರ ಯುವಕರು ಅಲ್ಲಿ ಕಲೆತು ಗಾಳಿಗೋಪುರ ಕಟ್ಟುತ್ತಾರೆ. ಆಟವಾಡಿ ಆಯಾಸಗೊಂಡವರು ಹಾಯಾಗಿ ಒಂದಿಷ್ಟು ಕುಳಿತು ತೆರಳುತ್ತಾರೆ. ದಾರಿ ಹೋಕರಿಗೆ ಅದೊಂದು ದೊಡ್ಡ ಆಶ್ರಯ.

ಊರಿನ ವಿಶೇಷ ಸಮಾಚಾರವೇನಾದರೂ ಇದ್ದರೆ ಆ ಕಟ್ಟೆಗೆ ಗೊತ್ತು. ಹೋಟೇಲು ಗೋವಿಂದ ಭಟ್ಟರು ಅಲ್ಲಿಯ ಬಾತ್ಮೀದಾರರು. ಊರ ಸಮಾಚಾರಕ್ಕೆ ಅವರೇ ಸಾಕ್ಷಿ. ಕಟ್ಟೆಯೇ ಅದರ ಚರ್ಚಾಸ್ಥಳ.

o o o o o o

ಅವನು ಆ ಕಟ್ಟೆಯ ಮೇಲೆ ಕುಳಿತಿದ್ದ.

"ಓಹೋ ಶೀನಣ್ಣನೇ! ಬಹಳ ಅಪರೂಪ. ಪುತ್ತೂರು ಮಂಗಳೂರಿನ ಸರ್ಕೀಟು ನಡೆದಿತ್ತಂತೆ! ಯಾವಾಗ ಬಂದೆ?" ಪಂಚಾಯತ್ ಬೋರ್ಡ್ ಅಧ್ಯಕ್ಷ ರಾಘವರಾಯರು ದಾರಿಯಲ್ಲಿ ಮುಂದುವರಿಯುತ್ತಾ ಕೇಳಿದರು.

"ಹುಂ, ಈಗ ಬಂದೆ" ಶೀನಣ್ಣ ಉದಾಸೀನವಾಗಿಯೇ ನುಡಿದ. ರಾಘವರಾಯರು ಕಡೆಗಣ್ಣಿನಿಂದೊಮ್ಮೆ ನೋಡಿ, ನಕ್ಕು ಮಾಯವಾದರು. ಅವರ ದೊಣ್ಣೆಯ ತುದಿ ಬಹಳ ದೂರದ ವರೆಗೂ ಕಾಣುತ್ತಿತ್ತು. ಶೀನಣ್ಣನ ದೃಷ್ಟಿ ಅತ್ತ ಹರಿಯಿತು. ಮನಸ್ಸೂ, ಯೋಚನೆಯೂ ಹರಿಯಿತು. ಹೇಗಾದರೂ ಕೆಲಹೊತ್ತಿನಲ್ಲಿ ದೃಷ್ಟಿಯನ್ನು ತಿರುಗಿಸಿ ಜೇಡಿಡೆಗೆ ನೋಡತೊಡಗಿದ -- ಅಹುದು—ಅದೇ ಅವನ ಹುಟ್ಟೂರು! ಆ ಪ್ರಕೃತಿಸೌಂದರ್ಯದ ಮಲೆನಾಡಿನ ಹಳ್ಳಿಯಲ್ಲಿ ಅವನು ಜನ್ಮವೆತ್ತಿದ್ದ. ಆ ಜ್ವರದ ಸೀಮೆಯ ಮಡಿಲಲ್ಲಿ ಬೆಳೆದಿದ್ದ. ಮರಗಿಡಗಳಿಂದ ಹಸುರಾದ ಬೃಹದಾಕಾರದ ಆ ಪರ್ವತವನ್ನು ಕಂಡು ಮನದಣಿಯದ ಸಂತಸವನ್ನನುಭವಿಸಿದ್ದ. ಗೆಳೆಯರೊಡನೆ ಹಲವಾರು ಬಾರಿ ಅದರ ತುದಿಯನ್ನು ತುಳಿದು ಅಲ್ಲಿಯ ಕಲ್ಲುಗಳನ್ನುರುಳಿಸಿ ಬಾಲ್ಯದ ಚಾಪಲ್ಯವನ್ನು ತೀರಿಸಿಕೊಂಡಿದ್ದ. ಅಲ್ಲೇ ಧುಮುಕುತ್ತಿರುವ ಆ ಕಿರುಹೊಳೆ ಸೂರ್ಯನ ಹೊಂಗಿರಣಕ್ಕೆ ಪಳಪಳನೆ ಹೊಳೆಯುತ್ತಿತ್ತು.

ಆ ಅಬ್ಬಿ! ಆ ಹೊಳೆ! ಅದೆಷ್ಟುಸಲ ಶೀನನ ಬಚ್ಚಲುಮನೆಯಾಗಿತ್ತೋ ಏನೊ! ಬಳಿಯ ಬಂಡೆಕಲ್ಲಲ್ಲಿ ಕುಳಿತು ನೀರಿನ ಸೀರ್ಪನಿಗಳನ್ನು ಕಾಣ್ದಣಿಯೆ ಕಂಡು ಅದೆಷ್ಟೋ ಜಾರಿ ಮೈಮರೆತಿದ್ದ. ಅಲ್ಲೇ ಕೆಳಗೆ ಶೋಭಿಸುತ್ತಿತ್ತು ಕ್ರಮಬದ್ಧವಾದ ತೆಂಗು ಕಂಗುಗಳ ಸಾಲು! ಹಸುರು ಕೊಂಬೆಗಳಿಂದ ಕೈ ಬೀಸುತ್ತ ಹಸನಾಗಿ ನಿಂತ ಆ ತೋಟ! ಆ ಹೊಳೆಯ ಮುದ್ದಿನ ಕಿರುಗೂಸಾಗಿದ್ದಂತೆ ಅದು ಶೀನನ ಮಮತೆಯ ಮಗುವೂ ಆಗಿತ್ತು. ಅದೀಗ ಅವನನ್ನೇ ಕರೆಯುವಂತೆ ಭಾಸವಾಯಿತು.

“ಏನೋ ಶೀನ! ಯಾವಾಗ ಬಂದೆ! ಈಗೀಗ ನಿನ್ನನ್ನು ಕಾಣಲು ವರ್ಷಗಟ್ಟಲೆ ಪಾರ ಕಾಯಬೇಕಾಗುತ್ತದಯ್ಯಾ! ಮನೆಗೆ ಬಂದರೆ ಮಂಗಳೂರಿಗೆ ಹೋಗಿರುತ್ತೀಯೆ! ಇಲ್ಲಿಗೆ ಬಂದರೆ ಪುತ್ತೂರಿಗೆ ಹೋದ ವರ್ತಮಾನ!” ಪಟೇಲ ಕಡವೆಕಲ್ಲರ ಮಾತು ಶೀನಣ್ಣನನ್ನು ಬಡಿದೆಬ್ಬಿಸಿತು. ಬಳಿಗೆ ನೋಡುತ್ತಾನೆ ತೊಡೆಯಲ್ಲಿ ನವಭಾರತವನ್ನಿರಿಸಿಕೊಂಡು ಕನ್ನಡಕವನ್ನು ಮೂಗಿಗೇರಿಸುತ್ತಿದ್ದರು ಪಟೇಲರು.

ಪಟೇಲರು—ಶೀನಣ್ಣ ಕೂಡಿ ಆಡಿ ಬೆಳೆದವರು. ಒಂದು ಕಾಲದಲ್ಲಿ ಜೀವದ ಗೆಳೆಯರಾಗಿ ಬಾಳಿದವರು ಆದರೆ..... ಶೀನಣ್ಣನ ಹೃದಯ ತುಂಬಿಬರಲಾರಂಭಿಸಿತು. ಯಾವುದೋ ವೇದನೆ ಆತನ ಹೃದಯವನ್ನಿರಿದಂತಾಗುತ್ತಿತ್ತು.

ಅಲ್ಲಿಯ ವಾತಾವರಣ! ಪಟೇಲರ ಆ ಮನೆ! ಅಲ್ಲಿ ಅವರಿಗಿದ್ದ ಸ್ವಾಗತ! ನಗುಮೊಗದ ಸುಖದುಃಖದ ಕೇಳಿಕೆ! ‘ಬಂದೆಯಾ ಶೀನಣ್ಣ! ನಿನ್ನನ್ನು ನೋಡದೆ ತುಂಟ ಶಾರದೆ ಅಳುತ್ತಿದ್ದಳು. ಜೊತೆಗೆ ಸರಸಮ್ಮನೂ ಬರಬಾರದಿತ್ತೇ? ಅವಳು ಬಾರದೆ ತುಂಬಾ ದಿದವಾಯ್ತು’ ಇತ್ಯಾದಿ ಪಟೇಲರ ತಾಯಿ ಶಾರದಮ್ಮನವರ ಪ್ರೇಮದ ನುಡಿ ಅವನಿಗಾಗಿ ಕಾದಿರುತ್ತಿತ್ತು. ವೃದ್ಧೆಯಾದ ಶಾರದಮ್ಮನೆಂದರೆ ಶೀನಣ್ಣನಿಗೆ ಪ್ರಾಣ. “ಅಲ್ಲ ಶೀನಣ್ಣ! ದಿನಕ್ಕೊಮ್ಮೆಯಾದರೂ ಇತ್ತಕಡೆ ಬಂದು ಹೋದರೆ ತೊಂದರೆಯೇನಿದೆ?” ಪಟೇಲರ ಹೆಂಡತಿ ಗಂಗಮ್ಮನ ಭ್ರಾತೃಪ್ರೇಮದ ಕರೆ ಶೀನಣ್ಣನಿಗೆ ಯಾವಾಗಲೂ ಬರುತ್ತಿತ್ತು. ಗಂಗಮ್ಮ ಎಷ್ಟು ತಿಳಿದವಳೋ ಅಷ್ಟೇ ಮುಗ್ಧೆ. ಶೀನಣ್ಣನೆಂದರೆ ತನ್ನೊಡಹುಟ್ಟಿದ ಅಣ್ಣನಂತೆಯೇ ಅವಳ ಭಾವನೆಯಾಗಿತ್ತು ಶೀನಣ್ಣನಿಗೂ

ಅವಳಲ್ಲಿ ತಂಗಿಯ ನಿಸ್ಸಂಕೋಚ ಪ್ರೇಮವೇ ಇತ್ತು. ಶೀನಣ್ಣ ಮನೆಗೆ ಬಂದನೆಂದರೆ ಮಗು ಶಾರದೆ, ಮೀನಾಕ್ಷಿ, ಸುಂದರು ಎಲ್ಲರೂ ಅವನ ಮೇಲೆಯೇ.

ಶಾರದೆ ಎರಡನೆಯ ಜನ್ಮದಿನದಂದು — ಶೀನಣ್ಣ ಬರಲಿಲ್ಲ! ಮಧ್ಯಾಹ್ನ ವಾಯ್ತು! ಊಟಕ್ಕೆ ಹೊತ್ತಾಯ್ತು! ಶೀನಣ್ಣನೂ ಇಲ್ಲ, ಸರಸೂ ಬರಲಿಲ್ಲ. ಬರಬೇಕಿತ್ತು ... ... "ಸುಂದರೂ, ಮಾವನ ಮನೆಗೊಮ್ಮೆ ಹೋಗಿ ಬಾ ಮಗೂ," ಶಾರದಮ್ಮ ಅತ್ತಿತ್ತ ತಿರುಗಾಡುತ್ತಾ ಬಾಗಿಲಬಳಿ ನಿಂತು ಹೇಳು ತ್ತಿದ್ದಳು. ....ಸರಸಮ್ಮ ದೂರದಿಂದ ಕಂಡುದೇ ತಡ. ಶೀನಣ್ಣ ಬಂದೇ ಬಿಟ್ಟ—ಎಂಬ ಸುದ್ದಿಯು ಹರಡಿತು ಆದರೆ ಬಂದುದು ಸರಸಮ್ಮ ಮಾತ್ರ. ಸರಸಮ್ಮನ ಮೊಗವೂ ಕಂದಿದಂತಿತ್ತು. 'ಏನೇ ಸರಸೂ ಶೀನಣ್ಣ ಏಕೆ ಬರ ಲಿಲ್ಲ?" ಸರಸಮ್ಮ ಹತ್ತು ಮಾರು ದೂರದಲ್ಲಿರುವಾಗಲೇ ಕೇಳಿದಳು ಶಾರ ದಮ್ಮ. ನಿಟ್ಟುಸಿರಿಡುತ್ತಾ 'ಅವರಿಗೆ ತುಂಬಾ ಗಾಯವಾಗಿದೆ ಹಿರಿಯಮ್ಮ' (ಯಾವುದೋ ಬಾದರಾಯಣ ಸಂಬಂಧದ ಮೇಲೆ ಶಾರದಮ್ಮ ಸರಸಮ್ಮನ ಹಿರಿಯಮ್ಮನಾಗಬೇಕಿತ್ತು.) ಎಂದು ಹತ್ತಿರ ಬಂದವಳೇ ಶಾರದೆಯನ್ನೆತ್ತಿ "ಮಗುವಿಗೆ ನನ್ನ ಈ ಪ್ರೇಮದ ಕಾಣಿಕೆಯಿತ್ತು ಬಾ ಎಂದು ಕಳುಹಿಸಿದರು ನನ್ನನ್ನು" ಎಂದಳು ಸರಸಮ್ಮ! ಶಾರದೆಯ ಕೈಯಲ್ಲೊಂದು ಕಟ್ಟನ್ನಿತ್ತು 'ಇದು ನಿನ್ನ ಮಾವನ ಕಾಣಿಕೆ ತುಂಟೀ' ಎಂದು ಮುದ್ದಿಸುತ್ತಾ 'ಹೋಗು ತ್ತೇನೆ ಹಿರಿಯಮ್ಮ! ನಿಲ್ಲುವುದಿಲ್ಲ ಈಗ' ಎಂದಳು ಸರಸಮ್ಮ. ಆ ಮಗು ಮಾತ್ರ ಏನೂ ಅರಿಯದೆ, ನೀರು ತುಂಬಿದ ಸರಸಮ್ಮನ ಕಣ್ಣನ್ನೊಮ್ಮೆ ಒರಸಿತು.

'ಏನಾಯ್ತು ಸರಸೂ ಗಾಯವಾಗಲಿಕ್ಕೆ?' ಶಾರದಮ್ಮನ ಗಾಬರಿ ಪ್ರಶ್ನೆಗೆ ಸಂಕ್ಷಿಪ್ತವಾಗಿ ಸರಸಮ್ಮ ಹೀಗೆಂದಿದ್ದಳು. ಮಾವಿನ ಹಣ್ಣು ಕೊಯ್ಯಲಿಕ್ಕಾಗಿ ಶೀನಣ್ಣ ಮರಕ್ಕೇರಿದ್ದ' ಆಕಸ್ಮಾತ್ ಕೈತಪ್ಪಿ ಬಿದ್ದುಬಿಟ್ಟ, ಸರಸಮ್ಮ ಹೇಗೂ ಹೋಗಿ ಎತ್ತಿ ತಂದಿದ್ದಳು. ಶೀನಣ್ಣನ ತಾಯಿಯು (ಆಗ ಇದ್ದಳು) ಮದ್ದು ನಡೆಯಿತು, ಹೇಳಿಯಾದರೂ ಕಳುಹೋಣವೆಂದ ಅಲ್ಲಿ ಯಾರೂ ಇರಲಿಲ್ಲ. ಸಂಗತಿ ತಿಳಿಸಿದವಳೇ ಸರಸಮ್ಮ ನಡದೇ ಬಿಟ್ಟಳು.

ಸರಸಮ್ಮ ಮನೆಗೆ ತಲಪಿ ಮಿನಿಟೆರಡು ಮಿನಿಟಾಗಿರಲಿಲ್ಲ. ಮಗು ಶಾರದೆಯನ್ನೆತ್ತಿ ಪಕ್ಕದಲ್ಲಿ ನೇಚಿಕೊಂಡು ಶೇಂಕುತ್ತಾ ಬಂದು ಮೆಟ್ಟಲೇರಿದ್ದಳು ಶಾರದಮ್ಮ.

"ಏನು ಮಾಡಿಕೊಂಡೆ ಶೀನಣ್ಣಾ! .. ನೋಡು ಮಗೂ, ನಿನ್ನ ಮಾವನಿಗೆ ನೋವಂತೆ!" ಶಾರದಮ್ಮ ಶೀನಣ್ಣನ ಪಕ್ಕಕ್ಕೆ ಬಂದು ಕುಳಿತಿದ್ದಳು. ಆಗ ಶೀನಣ್ಣನ ಕಣ್ಣಲ್ಲಿ ನೀರೂರಿತ್ತು ಎಂತಹ ಹೃದಯ ಆದು ಅವನ ಕಣ್ಣಲ್ಲಿ ನೀರು ಹರಿಯುತ್ತಿತ್ತು.

"ಹೃದಯವು ಶುದ್ಧವಿದ್ದರೆ ತನ್ನಂತೆಯೇ ಪರರೆಂದು ಬಗೆದರೆ ಮಾತ್ರ ನಮ್ಮದು ರಾಮರಾಜ್ಯವಾದೀತು! ಹ್ಞ! ಗಾಂಧೀಜಿಯವರ ಕನಸಿನ ರಾಮರಾಜ್ಯ ಯಾವಾಗ ನೆನಸಾಗುವುದೋ! ಏನೋ! ಈ ಮಾರಿಗಳು ಇರುವಷ್ಟು ಕಾಲ ಕಷ್ಟ!" ಪಟೇಲರ ಗಟ್ಟಿಯಾದ ಓದುವಿಕೆ ಬಡಿದೆಬ್ಬಿಸಿತು ಶೀನಣ್ಣನನ್ನು "ಹಾಳಾದ ಕಮ್ಯುನಿಸ್ಟರು. ಸಮತಾವಾದಿಗಳು. ಯಾರ್ಯಾರ ಮನೆ ತೆಗೆದು ಮತ್ತೊಬ್ಬರನ್ನುದ್ಧಾರ ಮಾಡುವವರು. ಇವರಿಂದ ಜಗತ್ತಿನ ಶಾಂತಿಯೇ?" ಪಟೇಲರ ವಾಕ್ಸರಣಿ ಮುಂದುವರಿಯುತ್ತಿತ್ತು.

ಶೀನಣ್ಣನ ಕಣ್ಣಲ್ಲಿ ಮಾತ್ರ ನೀರೂರಿತ್ತು ........

ದೊಡ್ಡವರ ಜಗತ್ತು ಕಾರುಣ್ಯವಿಲ್ಲದ ಜಗತ್ತು! ಶೀನಣ್ಣನ ಭಾವನಾ ಸಾಮ್ರಾಜ್ಯ ಮತ್ತೆ ಉದಯಿಸಿತು. ಇಲ್ಲ! ದೊಡ್ಡವರ ಸಾಮ್ರಾಜ್ಯದ ಮರಳುಗಾಡಿನಲ್ಲಿಯೂ ಕರುಣೆಯ ಸ್ರೋತಸ್ಸಿದೆ. ಇದೆ! ಶಾರದಮ್ಮನ ಮನೆಯ ವೈಭವ–ಅದೆಂತಹ ಸುಖದ ಕಲ್ಪನೆಯಂತಿದೆ! ಮೂವತ್ತು ಖಂಡಿ ಅಡಿಕೆ! ಮುನ್ನೂರು ಮೂಡಿ ಭತ್ತ ಸಾಲದ ಸುಳಿವಿಲ್ಲ. ವರುಷಾವಧಿ ಉಳಿತಾಯ ಸಾವಿರ! ಮತ್ತೂ ಬೆಳೆಯುತ್ತಿತ್ತು ಅದು! ಮತ್ತೇನುಬೇಕು! ಆದರೂ ಶಾರದಮ್ಮನಂತಹ ಹೃದಯದಲ್ಲಿ ಧನದಹಂಕಾರವಿರಲಿಲ್ಲ. ದಾನಧರ್ಮಗಳಲ್ಲಿ ಕೊರತೆಯಿರಲಿಲ್ಲ. ಬಂದವರು ಬೈದು ಹೋಗುತ್ತಿರಲಿಲ್ಲ! ಆ ಭಾಗ್ಯ ಅವರದು!

ದೂರದಿಂದ ರಾಘವರಾಯರ ದೊಣ್ಣೆ ಕಾಣುತ್ತಿತ್ತು... ....

ಅಯ್ಯೋ! ರಾಘವರಾಯರು! ಹೃದಯದ ಕಲ್ಮಷವನ್ನು ನಗುವಿನಲ್ಲಿ

ತೇಲಿಸುತ್ತಿರುವ ಪುಣ್ಯಾತ್ಮರು! ಈಗಾಗಲೇ ನಕ್ಕು ಮಾತನಾಡಿಸಿದವರು—ಆದರೆ ಹಿಂದಿನಿಂದಾವ ಕುತಂತ್ರವಿದೆಯೋ ಯಾರಿಗೆ ಗೊತ್ತು? ಆ ಹೃದಯದಲ್ಲಿ ಕರುಣೆಯಿಲ್ಲ. ಉಪಕಾರದ ಭಾವನೆಯಿಲ್ಲ. ಕಾಮನೆಗೆ ಮಾತ್ರ ಕೊರತೆಯಿಲ್ಲ. ಹೇಗಾದರೂ ಮತ್ತೊಬ್ಬರ ಹೊಗೆ ಕಾಣಬೇಕೆಂಬುದೇ ಅವರ ಆಶೆ. ಮರಹಾವಿನಂತೇ.

ಶೀನಣ್ಣ ಯೋಚಿಸಿದ–ಅದः ಹಿಂದಿನ ಮಾತು. ಅಡಿಕೆಯ ಕ್ರಯ ಏರುತ್ತಲೇ ಇತ್ತು. ಊರಿನ ಕಳ್ಳರ ಜೋರೂ ಪ್ರಾರಂಭವಾಯ್ತು. ಶೀನಣ್ಣನ ಕರುಣಹೃದಯ–ನೆತ್ತರು–ಬಿಸಿಯಾಗಲಾಂಭಿಸಿತು. ಕಳ್ಳರಿಂದ ಊರನ್ನುಳಿಸುವ ಕಲ್ಪನೆಯ ಕನಸನ್ನೆತ್ತಿ ಅಂದು ರಾಘವರಾಯರಲ್ಲಿ ಕೇಳಿದ್ದ. 'ನಾವೊಂದು ಸೇನೆಯನ್ನು ಕಟ್ಟೋಣವೇ' ಎಂದು! ಮನಸ್ಸಿನಲ್ಲೆ ನಕ್ಕ ರಾಘವರಾಯರು 'ಹೇಗಾದರೂ ಕಟ್ಟಿ ಕೇಪ್ಟನ್ ಸಾಹೇಬರೇ–ಊರನ್ನುಳಿಸಿ' ಎಂದಿದ್ದರು: ರಾಘವರಾಯರ ಕೊಂಕನ್ನರಿಯದ ಶೀನಣ್ಣ ಗುಪ್ತವಾಗಿ ಅದೇ ಉತ್ಸಾಹದಲ್ಲಿ ಕಡವೆಕಲ್ಲರಲ್ಲಿಯೂ ತನ್ನ ಮನದಿಂಗಿತವನ್ನು ಹೀಗೆಂದ್ದದ. 'ಮೊತ್ತಮೊದಲು ಗ್ರಾಮಸೇವಾ ಸಂಘವೆಂದು ಸ್ಥಾಪಿಸುವುದು. ಸ್ವಯಂ ಸೇವಕರಾಗಿ ಬಂದ ತರುಣರನ್ನು ಮೆಂಬರರನ್ನಾಗಿಸಿ ಮತ್ತೆ ಒಂದು ಗ್ರಾಮ ಸಂರಕ್ಷಣಾ ದಳವನ್ನು ಪ್ರಾರಂಭಿಸುವುದು. ಆ ದಳವು ಕಳ್ಳರಿಂದ ಊರನ್ನು ರಕ್ಷಿಸಬೇಕು' ಎಂದು.

ಕಡವೆಕಲ್ಲರು ಯೋಚಿಸಿದ್ದರು.

ಒಂದು ಬೆಳೆಯಲ್ಲಿ ಹತ್ತು ಮಣ ಅಡಿಕೆಯಾದರೂ ಕಳ್ಳರ ಪಾಲಿಗಾಗುವುದು ಅವರ ತೋಟದ ವಾಡಿಕೆ. ಕ್ರಯವೇರಿದ ಈ ಸಮಯದಲ್ಲಿ ಹತ್ತು ಮಣವೆಂದರೆ ಒಂದು ಸಣ್ಣ ಸಂಸಾರದ ಜೀವನದ ದಾರಿ. ಸರಿ. ಶೀನಣ್ಣನೆಂದರೆ ಸಾಹಸಿ. ಹತ್ತು ಜನ ಸೇರಿದರೆಂದರೆ ಅದೊಂದು ದೊಡ್ಡ ಸೈನ್ಯಾಧಿಪತಿಯೇ ಆತ. ಕಾಸು ಖರ್ಚಿನಲ್ಲದೆ ಹತ್ತು ಮಣ ಉಳಿತಾಯವಾಗುವುದಿದ್ದರೆ ಯಾಕಾಗದು?

ಅವರೆಂದಿದ್ದರು "ಎಲ್ಲ ನಿನ್ನ ಭಾರ ಶೀನಣ್ಣ! ನನ್ನದು ತುಂಬಾ ಪ್ರೋತ್ಸಾಹ! ಗ್ರಾಮಸೇವೆಯಂತಹ ಪುಣ್ಯಕಾರ್ಯ ನೀನು ಮಾಡುವಾಗ

ನಾನೇಕೆ ಅಡ್ಡಿಯಾಡೇನು? ನಾನು ಪಟೇಲನಾಗಿ ನಿನ್ನ ಕಾರ್ಯಕ್ಕೆ ಜಯ ತಂದೀಯುವೆ." ಎಂದು.

ಶೀನಣ್ಣ ಉಬ್ಬಿದ್ದ. ತನ್ನ ಕಾರ್ಯ ಫಲಿಸಿತೆಂದು ಹಿಗ್ಗಿ ಶಾರದಮ್ಮ ನಲ್ಲೂ ವಿವರವಾಗಿ ಹೇಳಿದ್ದ. "ಏನು ಬೇಕಾದರೂ ಮಾಡಣ್ಣ! ನಿನ್ನ ಸತ್ಯ ನಿನ್ನ ಕೈ ಬಿಡಲಾರದು." ಎಂದು ಸಂತಸದಿಂದುಬ್ಬಿದ ಶೀನಣ್ಣನಿಗೆ ಹರಸುತ್ತಾ ಬಿಸಿ ಬಿಸಿ ಕಾಫಿ ತಂದಿಟ್ಟಿದ್ದರು ಶಾರದಮ್ಮ! ಆನಂದದಿಂದ ಆ ಕಾಫಿಯನ್ನು ಬೇಗನೆ ಕುಡಿಯಲೆತ್ನಿಸಿ ಆ ಬಿಸಿ ಬಿಸಿಯಲ್ಲಿ ನಾಲಗೆ ಸುಟ್ಟುಕೊಂಡಿದ್ದ–ನಿಜ.

ಪ್ರಾರಂಭವಾಗಿತ್ತು ಗ್ರಾಮ ಸಂರಕ್ಷಣಾ ದಳ ನಾಯಕ ಶೀನಣ್ಣನೇ! ಉಪನಾಯಕರೆಂದರೆ ಕೆಂಪನಕಟ್ಟೆ ಭೀಮಣ್ಣ! ಮಲ್ಲನ ಹಿತ್ತಲು ಗೋಪ, ಬೈಲಕರೆ ಶಂಕರ—ಇತ್ಯಾದಿ ಬಿಸಿ ಹುಮ್ಮನಸ್ಸಿನ ತರುಣರು. ಹತ್ತು ದಿನ ದಲ್ಲಿ ಮೂರು ಜನ ಕಳ್ಳರು ಪಟೇಲರ ಚಾವಡಿಯಿದಿರು ಪೋಲೀಸರ ಕೈಯಿಂದ ಪೆಟ್ಟು ತಿಂದು ಜೈಲುಮನೆಗೆ ಸೇರಿದ್ದರು. ಶೀನಣ್ಣನ ನಾಯಕತ್ವ ತೋಟದವ ರಿಗೆಲ್ಲಾ ಚನ್ನಾದ ನಿದ್ರೆ ಹತ್ತಿಸಿತು! ಕಡವೆಕಲ್ಲರು ಮನಸ್ಸಿನೊಳಗೇ ಹತ್ತು ಮಣ ಅಡಿಕೆಯ ಲಾಭಾಂಶದ ಗೋಪುರ ಕಟ್ಟಿದ್ದರು. ಆದರೆ ನಾಲ್ಕು ಜನ ಸೇರಿದಲ್ಲಿ ಶೀನಣ್ಣನ ಸಾಹಸ ಕೇಳಿಸುವಾಗ ಏನೋ ಒಂದು ರೀತಿಯಾಗು ತ್ತಿತ್ತು ಅಂತರ್ಯದಲ್ಲಿ ಅವರಿಗೆ.

ನಾಲ್ಕು ತಿಂಗಳಾಯ್ತು. ಶೀನಣ್ಣನ ಕಾರ್ಯ ಎಡೆಬಿಡದೆ ಸಾಗು ತ್ತಿತ್ತು. ಕಳ್ಳರ ಸಂಖ್ಯೆಯು ಕಡಿಮೆಯಾಗುತ್ತಾ ಬಂದಿತ್ತು: ಹಲವು ಜೈಲು ಮನೆ ಸೇರಿದ ಚೋರನಾಯಕರು ಹಿಂದಿರುಗಿ ಬಂದು ಶೀನಣ್ಣನೆಂದರೆ ಹಿಂದಿ ನಿಂದ ಹೂಂಗುಟ್ಟಿ ಹಲ್ಲು ಕಡಿಯಲಾರಂಭಿಸಿದ್ದರು. ಅವರಲ್ಲಿ ರಾಮಪ್ಪ ಮುಖ್ಯಸ್ಥ. ಮೊತ್ತಮೊದಲನೆಯ ಸಫಲತೆಯಾದದ್ದು ಆತನಲ್ಲಿ. ಊರಿನ ತೋಟ ಮತ್ತು ಅದರ ಉದ್ದಳತೆಯ ಅರಿವಿದ್ದ ರಾಮಪ್ಪನನ್ನು ಶೀನಣ್ಣ ಹೇಗೂ ಮೊದಲ ಉತ್ಸಾಹದಿಂದಲೇ ಹಿಡಿದುಬಿಟ್ಟಿದ್ದ. ಹಾಗೆಯೇ ಮೂರು ತಿಂಗಳ ಜೈಲುವಾಸವೂ ಆಗಿತ್ತು ಅವನಿಗೆ. ಇದೀಗ ಪುನಃ ಅವನು ಊರನ್ನು ಸೇರಿದ್ದ. ಶೀನಣ್ಣನ ಕಾರ್ಯ ಇನ್ನೂ ನಡೆಯುತ್ತಿರುವವನ್ನು ನೆನೆನೆನೆದು ಉರಿಕಾರುತ್ತಿದ್ದ.

ಆವನ ಸಾಯಂಕಾಲದ 'ಕೆಂಪ್' ಊರಕರೆಯ ಮೂಸೆಯಂಗಡಿಯಲ್ಲಿ. ಆ ಮೂಸೆಗೆ ಒಂದು ಖಂಡಿ ಸಿಗುವ ಸ್ಥಳವನ್ನು ಗೇಣಿಗೆ ಮಾಡಿಕೊಂಡು ಮೂರು ನಾಲ್ಕು ಖಂಡಿ ಉತ್ಪತ್ತಿಯಾಗುತ್ತಿದ್ದುದು ರಾಮಪ್ಪನ ಅಖಂಡ ಸಾಹಸದಿಂದಲೇ. 'ಸ್ಟ್ರಾಂಗ್ ಚಾಯ'ದೊಂದಿಗೆ ಶಿಣೈ ಬೀಡಿಯೊಂದನ್ನಿತ್ತು ರಾಮಪ್ಪನನ್ನು ಹುರಿದುಂಬಿಸುವುದು ಅವನ ನಿತ್ಯ ಕರ್ತವ್ಯ. ಸಾಯಂಕಾಲ ನಾಲ್ಕು ಗಂಟೆಯಿಂದ ಬೆಳಗಿನ ಜಾವ ನಾಲ್ಕು ಗಂಟೆಯ ವರೆಗೆ ಮೂಸೆಯೆಂದಂತೆ ಕುಣಿಯುತ್ತಿರುವುದು ರಾಮಪ್ಪನ ವಾಡಿಕೆ. ಮೂಸೆಯ ಚುರುಕು ಬುದ್ಧಿ ರಾಮಪ್ಪನ ಗಂಡುತನಕ್ಕೆ ದಲಾಲಿತ್ವವನ್ನು ವಹಿಸಿ ಆತನನ್ನು ತನ್ನ ಕೈಗೊಂಬೆಯನ್ನಾಗಿಸಿತ್ತು.

ಜೈಲಿಂದ ಬಂದವನೇ ರಾಮಪ್ಪ ಕಾಲಿಟ್ಟುದು ಮೂಸೆಯ ಚಾದಂಗಡಿಯಲ್ಲಿ. ಆದರದಿಂದ ಕ್ಷೇಮಸಮಾಚಾರವನ್ನು ವಿಚಾರಿಸಿದವನೂ ಮೂಸೆಯೇ. ಶೀನಣ್ಣನ ಕಾರ್ಯವನ್ನೆಲ್ಲ ಒಂದಕ್ಕೆ ನಾಲ್ಕು ಹೇಳಿ ರಾಮಪ್ಪನನ್ನು ಕೆರಳಿಸಿದವನೂ ಮೂಸೆಯೇ. ಹಾಗೆ ಬಂದೊಡನೆಯೇ ಮೂಸೆಯಿಂದಾಗಿ ಹಲ್ಲು ಕಡಿಯಲಾರಂಭಿಸಿದ್ದ ರಾಮಪ್ಪ ಇನ್ನೂ ಹಾಗೆಯೇ ಉರಿಯುತ್ತಿದ್ದ. ಅದಕ್ಕೆ ಅನುಕೂಲವಾಗುವಂತೆ ಮೂಸೆಯ ಸಹಾಯದಿಂದ ರಾಘವರಾಯರ 'ಮೈನಾತಿ' ತನವೂ ದೊರತಿತ್ತು.

ಮೂಸೆಯ ದಿನದಿನದ ಚಾಡಿಯಿಂದ ರಾಘವರಾಯರಿಗೂ ಶೀನಣ್ಣನ ಮೇಲೆ ಅಸೂಯೆ ಬೆಳೆಯುತ್ತಲೇ ಇತ್ತು.

ಅದೊಂದು ಕೆಟ್ಟ ಮುಹೂರ್ತ. ಬೆಟ್ಟದ ಚಾವಡಿ ಈಶ್ವರಯ್ಯನವರ ತೋಟದಸುತ್ತ ಗಸ್ತು ತಿರುಗುತ್ತಿತ್ತು ಗ್ರಾಮಸಂರಕ್ಷಣಾ ದಳ. ಮಧ್ಯ ರಾತ್ರಿಯ ಸಮಯ. ಹತ್ತಾರು ಜನ ಬಂದು ಅಡಿಕೆ ಮರವನ್ನೇರಿದರು. ದಳದ ನಾಯಕರೆಲ್ಲ ತಮ್ಮ ಹತ್ಯಾರನ್ನು ಹಿಡಿದು ಸಜ್ಜಾದರು. ಮರದಿಂದಿಳಿದ ಕಳ್ಳರ ತಂಡಕ್ಕೂ ದಳಕ್ಕೂ ಕಾದಾಟವಾರಂಭವಾಯಿತು. ದಳದ ಸಾಹಸವೇನೋ ಗೆದ್ದಿತು. ಆದರೆ ರಾಮಪ್ಪನ ತಲೆಗೆ ಚೆನ್ನಾಗಿ ಪೆಟ್ಟಾದುದು ಮತ್ತೆ ಗೊತ್ತಾಯಿತು

ಮರುದಿನ ಬೆಳಗಾಯ್ತು. ಬೆಳಗಾಗುತ್ತಲೇ ಸುದ್ದಿ ಕೇಳಿದ ರಾಘವರಾಯರು ಶೀನಣ್ಣನ ಮೇಲೆ 'ಭಯಂಕರ' ರೇಗಾಡಿದರು, ರಾಮಪ್ಪನಿಗೆ

ವ್ಯರ್ಥವಾಗಿ ಹೊಡೆದ ಶೀನಣ್ಣನೆಂದು ಊರಲ್ಲೆಲ್ಲಾ ಸಾರುತ್ತಾ ಶೀನಣ್ಣನ ಮೇಲೆ ದಾವೆ ಹೂಡಿದರು. ಅವರ ವಾಗ್ಮೂಲ ಹೀಗಿತ್ತು "ರಾಮಪ್ಪನ ಮೇಲೆ ಶೀನಣ್ಣನಿಗೆ ಮೊದಲೇ ದ್ರೋಹ. ಶೀನಣ್ಣ ದಳವೆಂಬುದನ್ನು ಕಟ್ಟಿ ಕೊಂಡು ಕಳ್ಳರನ್ನು ಪತ್ತೆಹಚ್ಚುವ ಬದಲು ತಾನೇ ಕಳ್ಳತನ ಮಾಡುತ್ತಾನೆ. ಆ ದಿನ ರಾತ್ರಿ ಆಕಸ್ಮಾತ್ತಾಗಿ ಕಾಣಸಿಕ್ಕಿದ ರಾಮಪ್ಪ ಮತ್ತು ಶೀನಣ್ಣರೊಳಗೆ ಮಾತಿಗೆ ಮಾತು ಹತ್ತಿ ರಾಮಪ್ಪನನ್ನು ಸಾಯ ಹೊಡೆದರು." ಎಂದು. ರಾಮಪ್ಪನನ್ನು ಆಸ್ಪತ್ರೆಗೆ ಸೇರಿಸಿಯಾಗಿತ್ತು. ರಾಘವರಾಯರ ಹಣದ ಪ್ರಭಾವ ಡಾಕ್ಟರರಿಂದಲೂ ಅವರ ವಾಗ್ಮೂಲವನ್ನು ಬಲಪಡಿಸಿತ್ತು.

ಊರಲ್ಲೆಲ್ಲಾ ಆಶ್ಚರ್ಯವೇ ಆಶ್ಚರ್ಯ. ಶೀನಣ್ಣ ಕೇಳುತ್ತಲೇ ದಂಗು ಬಡೆದಂತಾಗಿದ್ದ. "ಅಯ್ಯೋ! ಜನರೇ ....."

ನಿಟ್ಟುಸಿರೊಂದು ಶೀನಣ್ಣನಿಂದ ಹೊರ ಹೊಮ್ಮಿತು. ದೂರದಿಂದ ಕೇಳುತ್ತಿತ್ತು ರಾಘವರಾಯರ ಬೊಬ್ಬಾಟ. "ಪೋಲೀ—ರಿಪೋರ್ಟ್ ಕೊಟ್ಟು ನಿನ್ನನ್ನು ಜೈಲಿಗೆ ಹಾಕಿಸುತ್ತೇನೆ ......"

ಶೀನಣ್ಣನ ಹೃದಯದಲ್ಲಿ ಹಿಂದಾದ ಗಾಯ ಮತ್ತೊಮ್ಮೆ ಮೂಡಿ ಹೊಗೆಯಾಡಿತು.

ಅಂದು ಪೋಲೀಸರು ಬಂದಿದ್ದರು. ಶೀನಣ್ಣನನ್ನು ಹೊಗಳಿ ಮಾತ ನಾಡುತ್ತಿದ್ದವರು ಆತನ ವಿಚಾರಣೆಗೇ ಜೋರು ಮಾಡುತ್ತಿದ್ದರು. ಪಟೇಲರ ಗ್ರಾಮಚಾವಡಿ. ರಾಘವರಾಯರು ಹಲ್ಲು ಕಡಿಯುತ್ತಾ ಕುಳಿತಿದ್ದರು. ಪೋಲೀಸ್ ಸಬ್ ಇನ್ಸ್‌ಪೆಕ್ಟರರು ಶೀನಣ್ಣನನ್ನು ನೋಡುತ್ತಾ ಕುಳಿತಿದ್ದರು. ಕಡವೆಕಲ್ಲರ ಮುಖದಲ್ಲಿ ಮಾತ್ರ ಅಸ್ಪಷ್ಟ ವೇದನೆ ಮತ್ತು ಸಂತಸಗಳು ತಾಂಡವವಾಡುತ್ತಿದ್ದುವು. ಇನ್ಸ್‌ಪೆಕ್ಟರರು ಹೀಗೆಂದಿದ್ದರು–"ಶೀನಣ್ಣನವರೇ ನಿಮ್ಮ ಸೇವಾ ಕಾರ್ಯವು ಈ ರೀತಿಗಿಳಿಯಿತೇ? ನಿಮ್ಮಂಥವರೇ ಹೀಗೆ ಮಾಡಿ ದರೆ... ...? ನೀವು ಸಮರ್ಥರು, ನ್ಯಾಯಶೀಲರು. ಏನು ಮಾಡಬೇಕೆಂದು ನೀವೇ ಹೇಳಿ."

"ನನ್ನ ನ್ಯಾಯವು ಹಿಂದಿನಂತೆಯೇ ಈಗಲೂ ಇದೆ. ಕಳ್ಳನನ್ನು ಹಿಡಿ ದಾಗ ಅವನು ಹೊಡೆದುದಕ್ಕೆ ಪ್ರತಿಯಾಗಿ ಹೊಡೆದುದು ನಮ್ಮ ಅಪರಾಧವೇ?

ರೊಂದಿಗೆ ರಾಘವರಾಯರ ಸ್ನೇಹವೂ ಬಹಳ ಜೋರಾಗಿತ್ತು. ದಿನಕ್ಕೊಂದು ಗಂಟೆಯಾದರೂ ಅದು-ಇದು ಪಿಸುಪಿಸು ಸುದ್ದಿ ಅವರೊಳಗೆ ನಡೆಯುತ್ತಲೇ ಇತ್ತು. ರಾಘವರಾಯರ ರೀತಿಯೇ ಅದು.

ಶೀನಣ್ಣ ಮಾತ್ರ ಕೇಳಿಯೂ ಕೇಳದಂತಿದ್ದ. ಆದರೆ ಊರಿನ ಯಾವುದೋ ಒಳಸಂಚು ಶೀನಣ್ಣನ ವ್ಯಕ್ತಿತ್ವವನ್ನು ಹಾಳು ಮಾಡುತ್ತಿತ್ತು. ಪ್ರಕೃತಿಯೇ ಅವನನ್ನು ನೋಡಿ ನಗುವಂತೆ ಭಾಸವಾಗುತ್ತಿತ್ತು ಆತನಿಗೆ.

ಶೀನಣ್ಣನನ್ನು ಉದಾಸೀನವಾವರಿಸಿತ್ತು. ದಿನಕ್ಕೊಮ್ಮೆ ಬಂದು ಊರ ಆ ಕಟ್ಟೆಯಲ್ಲಿ ಕೆಲಹೊತ್ತು ಶೂನ್ಯ ದೃಷ್ಟಿಯನ್ನು ಬೀರುತ್ತಾ ಕುಳಿತಿರುವುದು. ಊರಪ್ರಮುಖರು ಬಂದರೆಂದರೆ ಅಲ್ಲಿಂದೆದ್ದು ಮನೆಯತ್ತ ಸಾಗುವುದು ಅವನ ನಿತ್ಯ ವಿಧಿಯಾಗಿತ್ತು.

ಶೀನಣ್ಣ ಮುಂದುವರಿಯುತಿದ್ದ........

ಅದೊಂದು ಘಟನೆ—ಅವನ ಸ್ಮೃತಿಪಟಕ್ಕಿಳಿಯಿತು.

ಹಲವು ದಿನಗಳ ಬಳಿಕ ಅಂದು ಕಡವೆಕಲ್ಲರ ಮನೆಮೆಟ್ಟಲೇರಿದ್ದ. 'ಓಹೋ ಶೀನಣ್ಣನೇ' ಎಂಬ ಪರಿಚಿತ ಸ್ವರವೊಂದಂರತೆನ್ನಬಹುದಾದ ಮಾತು ಕೇಳಿಸಿತು. ಶೀನಣ್ಣ ಮನೆಯೊಳಕ್ಕೆ ನುಗ್ಗುತ್ತಲೇ ಯಾವಾಗಲೂ ಶಾರದಮ್ಮ ಕುಳಿತುಕೊಳ್ಳುವ ಸ್ಥಳದಿಂದ ಯಾರೋ ಎದ್ದು ಹೋದಂತಾಯಿತು. ಶಾರದಮ್ಮ ಮಾತ್ರ ಜಗಲಿಯ ಮೂಲೆಯೊಂದರಲ್ಲಿ ಕುಳಿತುಕೊಂಡಿದ್ದಳು. ಹೌದು—ಅವಳದೇ ಆ ಸ್ವರ. ಓಹೋ ಶೀನಣ್ಣನೇ ಎಂದು. ಬಂದೆಯಾ ಶೀನಣ್ಣ ಎಂಬ ಪ್ರೀತಿಯ ಕರೆ ಓಹೋ ಶೀನಣ್ಣ ಎಂಬಲ್ಲಿಗೆ ತಲಪಿತ್ತು.

"ಓಹೋ ಶೀನಣ್ಣ! ಏನಾದರೂ ಕಾರ್ಯವಿದೆಯೋ?" ಒಳಗಿನಿಂದ ಕೈಯೊರಸುತ್ತಾ ಬರುತ್ತಿದ್ದ ಕಡವೆಕಲ್ಲರು ಪ್ರಶ್ನಿಸಿದರು.

"ಕೆಲಸವೇನಿಲ್ಲ—ಹೀಗೇ ಬಂದೆ" ಶೀನಣ್ಣನ ಉತ್ತರ.

"ಹಾಗಾದರೊಂದು ಚೋದ್ಯವೇ ಸರಿ" ದೂರದಲ್ಲಿ ಕುಳಿತಿದ್ದ ಕಡವೆಕಲ್ಲರ ಮುದಿತಂದೆ ದನಿಗೂಡಿಸಿದ್ದರು.

ಶೀನಣ್ಣನ ಹೃದಯದಲ್ಲಿ ವೇದನೆ ತಾಂಡವಾಡುತ್ತಿತ್ತು. ಹತ್ತು ನಿಮಿಷ ನಿಸ್ತಬ್ಧವಾತಾವರಣವಿತ್ತು ಅಲ್ಲಿ. ಯಾರೂ ಮಾತೆತ್ತುವಂತಿಲ್ಲ.

ಕೊನೆಗೆ ಗಂಗಮ್ಮ ಒಂದು ಗ್ಲಾಸು ಕಾಫಿ ತಂದಿಟ್ಟಳು ಶೀನಣ್ಣನೆದುರಿಗೆ. ಶೀನಣ್ಣ ಗಂಟಲಿಗಿಳಿಸಿಕೊಂಡ. ಆಯ್ಯೊ! ಅಂದು ಆ ಕಾಫಿ ಗಂಟುಲು ಸುಟ್ಟುದು ಮತ್ತೊಮ್ಮೆ ನೆನಪಾಯಿತು. ಮತ್ತೆಲ್ಲವೂ ಭಣ! ಭಣ! ಶೀನಣ್ಣ 'ಹೋಗುತ್ತೇನೆ' ಎಂದವನೇ ಎದ್ದು ಹೊರಟುಬಿಟ್ಟಿದ್ದ.

ಆ ರಾತ್ರಿ ಶೀನಣ್ಣನಿಗೆ ನಿದ್ದೆಯೇ ಹತ್ತಿರಲಿಲ್ಲ. ತನ್ನ ಜೀವನದ ಇತಿಹಾಸವನ್ನೆಲ್ಲ ನೆನೆಯುತ್ತ ಕಣ್ಣೀರಿಟ್ಟಿದ್ದ.

ಕೈಯಲೊಂದು ಗಂಟು–ಆ ಜೀಲ ಹಿಡಿದು ಆತ ಮುಂದುವರಿಯುತ್ತಿದ್ದ—ದಾರಿ ಸಾಗುತ್ತಲೇ ಇತ್ತು........

"ಅಮ್ಮ ಅಪ್ಪ ಬಂದರು." ಶೀನಣ್ಣನ ಮಗ ವೆಂಕಣ್ಣನ ದನಿ ಶೀನಣ್ಣನನ್ನು ಭಾವನಾ ಸಾಮ್ರಾಜ್ಯದಿಂದ ಹಿಂದಕ್ಕೆಳೆಯಿತು. ಆಗ ಆವನು ತನ್ನ ಮನೆಯಂಗಳದಲ್ಲಿ ಕಾಲಿರಿಸಿದ್ದ. ಸರಸು ಹೊರಗೆ ಬಂದವಳೇ ನೋಡಿ ಒಳಗೆ ಹೋಗಿ ಒಂದು ಗ್ಲಾಸು ಕಾಫಿ ತಂದಾಗ ಶೀನಣ್ಣ ಮನೆಯ ಜಗಲಿಯಲ್ಲಿ ಹಾಯಾಗಿ ಕುಳಿತಿದ್ದ.

ಅವನೆದೆಯ ನೋವು ಮುಃಖದ ಗೆಲವನ್ನು ಮಾಯಾವಾಗಿಸಿತ್ತು. ಇದಿರಿಗಿಟ್ಟಿದ್ದ ಕಾಫಿ ತಣಿಯುತ್ತಲಿತ್ತು. ಎದೆಯ ಮೇಲಿನ ನೋವು ಮಾತ್ರ ಬಲಿಯುತ್ತಲಿತ್ತು.

"ಕಾಫಿ ಆರುತ್ತಿದೆ" ಸರಸು ಎಚ್ಚರಿಸಿದಾಗ ಶೀನಣ್ಣ ಅವಳ ಮುಖವನ್ನೊಮ್ಮೆ ನೋಡಿ ಕಾಫಿಯನ್ನು ಗಳಗಳನೆ ಕುಡಿದ.

o o o o o o

ಆ ದಿನ ರಾತ್ರಿ—

"ಸಾಯಂಕಾಲ ಶಾರದಮ್ಮನವರು ಬಂದಿದ್ದರು." ಪಲ್ಯವಿಕ್ಕುತ್ತಾ ಮಾತುತೆಗೆದಳು ಸರಸು.

"ಏನೆಂದರು" ಉದಾಸೀನನಾಗಿಯೇ ನುಡಿದ ಶೀನಣ್ಣ.

"ಹೇಳುವುದೇನು—ನಮ್ಮ ಗ್ರಹಚಾರ" ನಿಟ್ಟುಸಿರುಬಿಟ್ಟಳು.

"ಅಂದರೆ"

"ಈಗ ಹತ್ತು ದಿನಗಳಿಂದ ಸುಮಾರು ಒಂದು ಖಂಡಿಯಾಗುವಷ್ಟು ಅಡಿಕೆ ಕಳ್ಳರ ಪಾಲಾಗಿದೆಯಂತೆ ಅವರ ತೋಟದಿಂದ. ಅದಕ್ಕೆಲ್ಲ ಕಾರಣ...."

ಶೀನಣ್ಣ ಕತ್ತೆತ್ತಿದ. ಸರಸುವಿನ ಕಣ್ಣಲ್ಲಿ ನೀರೂರಿತ್ತು. ಆ ನೀರೇ ವಾಕ್ಯ ಪೂರ್ತಿಗೊಳಿಸಿತ್ತು. ದಾಂಪತ್ಯ ಜೀವನದ ಹತ್ತು ವರುಷಗಳಲ್ಲಿ ಶೀನಣ್ಣನಿದಿರು ದುಃಖದ ಒಂದು ಮಾತನ್ನಾದರೂ ಆಡಿದವಳಲ್ಲ ಸರಸು. ಎಂತಹ ದುಃಖವೇ ಇರಲಿ ಸಂತಸದ ನಗುವಿನಲ್ಲಿ ತೇಲಿಸಿಬಿಡುತ್ತಿದ್ದಳು. ಕಷ್ಟದ ಜೀವನದಲ್ಲೂ ಅಮೃತಧಾರೆಯೆಂದರೆ ಆಕೆಯ ನಗು ಮಾತ್ರ. ಈಗ ಶೀನಣ್ಣನ ಹೃದಯ ಕಂಪಿಸಿತು. ದುಃಖಕ್ಕಾಗಿ ಎದೆಗುಂದದ ಆ ಸರಸುವಿನ ಕಣ್ಣು ಇಂದು ತೇವವಾಗಿದೆ. ಶೀನಣ್ಣನಿಗೆ ಅನ್ನವೇ ರುಚಿಸಲಿಲ್ಲ. ಊಟದ ಶಾಸ್ತ್ರ ಮುಗಿಸಿ ಎದ್ದುಬಿಟ್ಟ.

ಮಗು ವೆಂಕಣ್ಣ ದೀಪದ ಹತ್ತಿರ ಕುಳಿತು ಆಡುತ್ತಲಿದ್ದ. ಯಾವುದೋ ಪುಸ್ತಕವನ್ನೆತ್ತಿಕೊಂಡು ಭಾರೀ ಓದುವವನಂತೆ ನಟಿಸಿ ಗೊಣಗುತ್ತಲಿದ್ದ. ಬಳಿಯಲ್ಲೇ ಸಣ್ಣ ಮಗು ಇಂದಿರಾ ತೊಡೆಗೆ ತಟ್ಟಿಕೊಳ್ಳುತ್ತಾ 'ಅ, ಅ, ಅ,' ಎನ್ನುತ್ತಿತ್ತು. ಶೀನಣ್ಣ ಹತ್ತಿರ ಸುಳಿದ. ಹಾತೆಯೊಂದು ಹಾರಿ ಬಂದು ದೀಪವನ್ನು ಆರಿಸಿ ಅಂಧಕಾರದಲ್ಲಿ ಆ ಮೂವರನ್ನು ಕೆಡವಿತು. ಶೀನಣ್ಣ ನೇರವಾಗಿ ಬಂದವನೇ ಮಗುವನ್ನೆತ್ತಿಕೊಂಡ. ಆದರೆ ಅದರ 'ಅ, ಅ,' ಭಾಷೆಗಾವುದಕ್ಕೂ ಆತನ ಉತ್ತರವಿರಲಿಲ್ಲ. ಆ ಕಾಣದ ಕತ್ತಲೆಯಲ್ಲಿ ಮಗುವು ಕಿರುಚಲಾರಂಭಿಸಿತು. ಏನೇನೋ ಸಮಾಧಾನ ಪಡಿಸಿದ ಶೀನಣ್ಣ. ವೆಂಕಣ್ಣ ಆಗಲೇ ದೀಪತಂದಿರಿಸಿದ್ದ.

ಶೀನಣ್ಣನ ಮನಸ್ಸಿನಲ್ಲಿ ಕಲ್ಪನೆಗಳ ತಾಕಲಾಟ ಆರಂಭ!

ಶೀನಣ್ಣ ಮಾವನ ಮನೆಗೆ ಹೋಗಿದ್ದ ಹಿಂದಿನ ದಿನ. ಆ ರಾತ್ರಿ ಮಾವನ ಮನೆಯಲ್ಲಿ ಮಾವ ಹೀಗೆಂದಿದ್ದರು. "ನೋಡು ಶೀನಣ್ಣಾ! ಸುರೇಶ (ಮಗ) ಮಂಗಳೂರಿಗೆ ಹೋಗಿದ್ದಾನೆ. ನನಗೆ ಆರೋಗ್ಯವಿಲ್ಲ. ಅಡಿಕೆತೋಟ ದಿನೇ ದಿನೇ ಹಾಳಾಗುತ್ತಲಿದೆ. ಇವಳೊಬ್ಬಳು ಯಾವಾಗಲೂ ನರಳುತಿರುತ್ತಾಳೆ (ಹೆಂಡತಿ). ನಿನಗೆ ಆ ಊರಲ್ಲಿರುವ ಸೌಭಾಗ್ಯವೇನು? ಇಲ್ಲಿಗೆ ಬಂದು ಬಿಟ್ಟರಾಗದೆ?... ಇನ್ನೊಬ್ಬ ಅಳಿಯನಿದ್ದಿದ್ದರೆ ನಿನ್ನನು ಒತ್ತಾಯಿಸುತ್ತಿರಲಿಲ್ಲ."

ಎಂದು ಶೀನಣ್ಣ ಯೋಚಿಸಿದ. ಹೌದು! ಇಲ್ಲಿರುವ ಸೌಭಾಗ್ಯವೇನು? ಶೀನಣ್ಣನ ಮನಸ್ಸು ವಿಹ್ವಲವಾಯ್ತು. ಅಯ್ಯೋ ಈ ಮನೆ ತಂದೆಯೊಡನೆ ಒಂದೊಂದು ಹಿಡಿ ಮಣ್ಣು ಹೊತ್ತು ಕಟ್ಟಿಸಿದ ಮನೆ! ತಂದೆಯೇ ಬೆವರಿಳಿಸಿದ್ದಾರೆ ಇದಕ್ಕಾಗಿ!

ತಂದೆಯ ಪ್ರೀತಿಯ ರಸಬಿಂದು ಅಲ್ಲಿದೆ. "ಆ ಊರಿನಲ್ಲಿರುವ ಭಾಗ್ಯವೇನು?" ಮಾವನ ಮಾತಿದು. ಮನೆಯಿದಿರಿನ ಆ ಒಂದು ಎಕ್ರೆಯ ತೋಟ ಅದೆಷ್ಟು ಸುಂದರವಾಗಿ ಬೆಳೆದು ನಿಂತಿದೆ! ತಾನು ಸಣ್ಣದಿರುವಾಗ ತಂದೆಯೊಡನೆ ಅದಕ್ಕೂ ಮಣ್ಣು ಹೊತ್ತಿದ್ದ. ಗಿಡನೆಡಲು ಮುಂದಾಗಿದ್ದ. ಗೊಬ್ಬರ ಹೊರುವೆನೆಂದೂ ಹಟ ಹಿಡಿದಿದ್ದ! ತಂದೆ ಅಪ್ಪಿ ಮುದ್ದಾಡಿ ಕಣ್ಣೀರು ಸುರಿಸಿದ್ದರು.

ಆಗಿನ ಜೀವನದ ಕ್ರಮ—ಬೆಳಗಾಯಿತೆಂದರೆ ಎದ್ದು ಮುಖ ತೊಳೆದು ಒಂದು ಗಂಟೆ 'ಬಾಯೀಪಾಠ' ಶ್ರೀಗಣ.... ಸುರುಮಾಡಬೇಕು. ಅದು ಮುಗಿಯುವಾಗ ಏನಾದರೂ ಒಂದಿಷ್ಟು ಹೊಟ್ಟೆಗೆ ಹಾಜರಾಗುತ್ತಿತ್ತು. ಮತ್ತೆ ಶಾಲೆ ಅಥವಾ 'ಕತ್ತಿಮುಟ್ಟಾಳೆ'. ಊಟ ಮಾಡಿ ಒಂದಿಷ್ಟು ಪುರಾಣ ವಾಚನ ಮತ್ತೆ ಪುನಃ ಕೆಲಸ. ಆಗಿನ ಕಾಲ! ಹಾಳು ಬಿದ್ದ ತೋಟ ಹಸನಾಗುವಂತಾಯ್ತು. ಇಂದು ಅದೇ ತೋಟದಲ್ಲಿ ಮೂರು ಖಂಡಿ ಅಡಿಕೆ ಬರುತ್ತಿದೆ. ಆದರೆ ಸಾಲ ಮಾತ್ರ ಇಂದು ಸಾವಿರಕ್ಕೇರಿದೆ.

'ಆ ಊರಿನಲ್ಲಿರುವ ಸೌಭಾಗ್ಯವೇನು?' ಮತ್ತೂ ಅದೇ—ಹೌದು—ಈಗೀಗ! ಕಡವೆಕಲ್ಲರ ತೋಟದ ಮೂಲೆಯಿಂದಿಳಿದು ಬರುವ ನೀರಿಗೆ ಸೊನ್ನೆಯಾಗುತ್ತಿದೆ. ಕಾಡಿದರೆ ಜಗಳ! ಬೇಡಿದರೆ ಕರುಣೆಯಿಲ್ಲದ ಹುಂಕಾರ! ಬೇಸಿಗೆ ಕಾಲದ ತೋಟ ಎಣ್ಣೆಕಾಣದ 'ಕೆಂಡಿ' ತಲೆಯಂತಾಗುತ್ತಿತ್ತು. ಮಾತನಾಡಿದರೆ ನಿಷ್ಠುರವಾಗುವುದೆಂದು ಸುಮ್ಮಗಿದ್ದ. ಅಯ್ಯೋ, ಎಂತಹ ದುಃಸ್ಥಿತಿ! ಈ ಊರಿನಲ್ಲಿರುವ ಸೌಭಾಗ್ಯವೇನು?

ಊರಿನ ರಾಜಕೀಯ ವಾತಾವರಣ! ಪಕ್ಷ ಪ್ರತಿಪಕ್ಷಗಳ ತಾಕಲಾಟ! ಮತ್ಸರದ ಹೋಮಾಗ್ನಿಯಲ್ಲಿ ಕಣ್ಣು ಬಿಡಲು ಸಾಧ್ಯವಿಲ್ಲದಂತಾಗಿದೆ. ಧನಿಕರ ತಲೆತಲೆ ತಾಕಲಾಟ ಬಡವರ ಕುತ್ತಿಗೆಗೆ ನೇಣು! ಶೀನಣ್ಣ ಯಾವ ಪಾರ್ಟಿಯಲ್ಲೂ ಇಲ್ಲದೆ ಸ್ವತಂತ್ರವಾಗಿದ್ದ ಆರು ತಿಂಗಳಿಂದ! ಅದೇ ಎಲ್ಲರ

ಕಣ್ಣು ಕೆಂಪಾಗುವ ಕಾರಣವಾಗಿತ್ತು. ಆಗತ್ಯಬಿದ್ದಾಗ ಹಣ ಕೇಳಿದರೆ 'ನಿನಗೇನು ಸ್ವತಂತ್ರನಲ್ಲವೆ ನೀನು? ನಮ್ಮಲ್ಲೇಲ್ಲಿದೆ ಮಾರಾಯಾ' ಎನ್ನುವ ಹಣವಂತರು. ಶೀನಣ್ಣ ತಂದೆಯಿರುವಾಗ ಆಮುತ್ತಿನ ನಾಲ್ಕು ವರುಷವೂ-ಎಂತಹ ಕಳ್ಚೆದೆಯಿತ್ತು? ಗ್ರಾಮದಲ್ಲೆಷ್ಟು ಒಗ್ಗಟ್ಟಿತ್ತು? ಈಗ ಈಗ??... ..

'ಆ ಊರಿನಲ್ಲಿರುವ ಸೌಭಾಗ್ಯವೇನು?'.. ....

"ಅಲ್ಲಿರುವ ಆಸ್ತಿಯನ್ನತ್ತ ವಾಯಿದೆ ಗೇಣಿಗೆ ಯಾರಿಗಾದರೂ ಇತ್ತು ಸಾಲ ತೀರಿಸಿಬಿಡು. ಇಲ್ಲಿ ಎಲ್ಲರೂ ಕೂಡಿಯೇ ಇರೋಣ! ನನಗೂ ಆಧಾರ ವಾಯ್ತು! ಮಕ್ಕಳ ವಿದ್ಯಾಭ್ಯಾಸಕ್ಕೂ ಅನುಕೂಲ" ಮಾವ ಉಪಸಂಹಾರ ಮಾಡಿದ್ದರು.

"ಶೀನಣ್ಣ ಈ ದಿನವೊಂದು ಹಂದಿ ಕೊಲ್ಲಲೇಬೇಕು. ಬಾ ಹೋಗೋಣ" ಬೀಡುಕಟ್ಟಿ ಗೋಪಾಲ ತಲೆಗೆ ಕಟ್ಟಿದ ಲೈಟನ್ನು ನಾಲ್ಕು ಕಡೆಗೂ ತಿರುಗಿ ಸುತ್ತಾ ಶೀನಣ್ಣನ ಮನೆಯಂಗಳಕ್ಕೆ ತಲಪುತ್ತಲೇ ಹೇಳಿದ. ಶೀನಣ್ಣ ಅತ್ತ ನೋಡಿದ. ಮನೆಯ ಜಗಲಿಗೇರಿದವನೇ ಗೋಪಾಲ ತನ್ನ ಕೋವಿ, ತೋಟೆಯ ಜೋಳಿಗೆ, ಬೆಟರಿಯ ಪೆಟ್ಟಿಗೆ ಇವನ್ನೆಲ್ಲ ಕೆಳಗಿರಿಸಿ ಕುಳಿತಿದ್ದ. ಶೀನಣ್ಣ ಆದುವರೆಗೂ ಮಾತನಾಡದೆಯೇ ನಿಂತಿದ್ದ.

"ಹುಂ—ಆಗ ಬಂದೆಯೆಂದು ವರ್ತಮಾನ ಸಿಕ್ಕಿತು! ಹಂದಿ ಹೊಡೆಯದೆ ಸುಮಾರು ದಿನವಾಯ್ತು ನೋಡು! ಹೋಗಿಯೇ ಬಿಡೋಣವೆಂದು ಬಂದುಬಿಟ್ಟೆ." ಗೋಪಾಲ ಅಲ್ಲಿಯೇ ಇದ್ದ ಎಲೆತಟ್ಟೆಯನ್ನು ಹತ್ತಿರಕ್ಕೆಳೆದು ಕೊಳ್ಳುತ್ತ ಹೇಳಿದ.

"ಹುಂ! ಬಡವರ ಬೇಟೆಯೊಂದೆಡೆ. ಪಶುಗಳ ಬೇಟೆಯೊಂದೆಡೆ." ನಿಟ್ಟುಸಿರುಬಿಡುತ್ತಾ ಶೀನಣ್ಣನೆಂದ. ಕೈಯಲ್ಲಿದ್ದ ಮಗು ಮತ್ತೊಮ್ಮೆ ಕೂಗಿಕೊಂಡಿತು.

"ಹಾ! ನಿನಗೆ ಗೊತ್ತಾಗಿದೆಯೇ ಶೀನಣ್ಣಾ!" ಆಶ್ಚರ್ಯದಿಂದ ಕೇಳಿದ ಗೋಪಾಲ.

"ಏನು?" ಶೀನಣ್ಣ ಸಹಜವಾಗಿಯೇ ಕೇಳಿದ.

"ಹೇಳುತ್ತೇನೆ ಹೊರಡು ಮೊದಲು" ಗೋಪಾಲ ಎಲೆಯುಗುಳಲು ಎದ್ದುನಿಂತ.

"ಇಲ್ಲ ಗೋಪಾಲ! ನಾನಿಂದು ಬರಲಾರೆ! ಪ್ರಯಾಣದಿಂದ ಮೈ ಕೈ ನೋಯುತ್ತಿದೆ ಏನೋ ಮನಸ್ಸಿಗೂ ಸ್ವಾಸ್ಥ್ಯವಿಲ್ಲ. ತಲೆ ಕುಡುಗಿದ ಶೀನಣ್ಣ.

"ಅಗತ್ಯವಾದೊಂದು ಮಾತಿದೆ ಶೀನಣ್ಣ! ಬರಲೇಬೇಕು" ಒತ್ತಾಯಿಸಿದ ಗೋಪಾಲ. ಶೀನಣ್ಣ ಅತ್ತಿತ್ತ ತಿರುಗಿದ 'ಆ ಊರಲ್ಲಿರುವ ಸೌಭಾಗ್ಯವೇನು?' ಶೀನಣ್ಣನ ಕಾಲು ಕುಂಠಿತವಾಗುತ್ತಿತ್ತು. ಕಣ್ಣು ಕ್ಷೀಣವಾಗಿತ್ತು. ಗೋಪಾಲ ಮತ್ತೂ ಒತ್ತಾಯಿಸಿದ. ಶೀನಣ್ಣನಿಗೆ ಉಪಾಯವಿಲ್ಲ. ಮಗುವನ್ನು ಸರಸುವಿನ ಕೈಗಿತ್ತು ತನ್ನ ಕೋವಿಯನ್ನು ಸರಿಗೊಳಿಸಲಾರಂಭಿಸಿದ.

"ಬೇಟೆಗೆ ಹೋಗುತ್ತೇನೆ. ಹುಲೀ ಹೊಡೀತ್ತೇನೆ. ಇಲೀ ಬೀಳ್ತೈತೆ" ವೆಂಕಣ್ಣ ಕೈತಟ್ಟಿ ಹೇಳಲಾರಂಭಿಸಿದ. ಎಷ್ಟೋ ದಿನ ಅದೇ ಹಾಡನ್ನು ಕೇಳಿ ಸಂತಸಗೊಂಡಿದ್ದ ಶೀನಣ್ಣಗಿಂದು ಕಣ್ಣಲ್ಲಿ ನೀರು ಬಂದಿತು. 'ಹುಂ. ನಮ್ಮಂತಹವರು ಹೊಡೆದ ಹುಲಿ ಇಲಿಯೇ' ಎಂದು ಉದ್ಗರಿಸಿದ. ಗೋಪಾಲ ವೆಂಕಣ್ಣನನ್ನು ತಮಾಷೆ ಮಾಡುತ್ತಾ ಆತನೊಡನೆ ಆಟವಾಡುತ್ತಿದ್ದ. ಶೀನಣ್ಣನ ತಲೆಗೆ ಯಾವುದೂ ಹೊಳೆಯಲಿಲ್ಲ. 'ಆ ಊರಲ್ಲಿರುವ ಸೌಭಾಗ್ಯವೇನು?' ಮತ್ತದೇ ಮಾತು!

ಇಬ್ಬರೂ ಬೇಟೆಗೆಂದು ಹೊರಟರು ವಾಡಿಕೆಯಂತೆ ಎರಡು ಸಿಂಗಲ್ ಚಹ ಬಂದಿತು ಸರಸುವಿನ ಕಡೆಯಿಂದ. ಅದನ್ನಿಷ್ಟು ಕುಡಿದ ಈರ್ವರೂ ಮುಂದೆ ನಡೆದರು. ಗೋಪಾಲ ಮುಂದೆ-ಮುಂದೆ ಶೀನಣ್ಣ ಹಿಂದಿನಿಂದ. ದೂರದ ಗುಡ್ಡೆಯೊಂದರ ತುದಿಗೇರುವ ವರೆಗೂ ಮೌನವೇ ಆವರಿಸಿತ್ತವರಲ್ಲಿ.

"ಶೀನಣ್ಣ!" ಮೌನವನ್ನೊಡೆದ ಗೋಪಾಲ.

"ಓ" ಎಂದ ಶೀನಣ್ಣ.

"ಇಲ್ಲಿ ಸ್ವಲ್ಪ ಕುಳಿತುಕೊಳ್ಳೋಣವೇ?"

"ಹುಂ"

"ನಿನ್ನ ತಲೆಯೇಕೆ ಕೆಟ್ಟಿದೆಯೋ ಶೀನಣ್ಣ?" ಕುತ್ತುಕೊಳ್ಳುತ್ತ ಕೇಳಿದ ಗೋಪಾಲ. "ಊಹುಂ" ಶೀನಣ್ಣನ ಉತ್ತರ.

"ನಾನು ಬಂದುದು ಬೇಟೆಗಾಗಿ ಅಲ್ಲ. ಬೇಟೆಯೊಂದನ್ನು ತಪ್ಪಿಸಲಿಕ್ಕಾಗಿ." ಆ ನಸುಗತ್ತಲೆಯಲ್ಲಿ ಶೀನಣ್ಣನ ಮುಖವನ್ನು ದಿಟ್ಟಿಸುತ್ತ ಗೋಪಾಲ ನುಡಿದ. ಶೀನಣ್ಣ ಗೋಪಾಲನ ಮುಖವನ್ನೊಮ್ಮೆ ದಿಟ್ಟಿಸಿ ಮಾತ್ರ ಸುಮ್ಮಗಾದ.

"ನೀನು ನಾಳೆ ಬೆಳಗಾಗುವಾಗಲೇ ಊರಿನಿಂದ ಮರೆಯಾಗಬೇಕು" ಮುಂದುವರಿಸಿದ ಗೋಪಾಲ.

"ಏಕೆ" ಗಾಬರಿಗೊಂಡ ಶೀನಣ್ಣ.

"ಇಲ್ಲದಿದ್ದರೆ ನಾಳೆ ನಿನಗೆ ನಡುಪೇಟೆಯಲ್ಲಿ ಪೆ...ಟ್ಟು ಬೀಳುವುದು." ಗೋಪಾಲನ ದನಿಯಲ್ಲಿ ದುಃಖದ ಭಾರವಿತ್ತು. ನೋವಿತ್ತು, ಮರುಕವಿತ್ತು, ಶೀನಣ್ಣ ನಿರುತ್ತರನಾದ.

ಏಕೆ ಮನುಷ್ಯನಂತೆ ಬಾಳುವುದೂ ತಪ್ಪೇ!

ಗೋಪಾಲನು ಮುಂದುವರಿಸಿದ "ಬಯಲ ಮನೆಯ ಗೋಪಮ್ಮನಿಗೆ ಮೊನ್ನೆ ದಾರಿಯಲ್ಲಿ ಬರುವಾಗ ಏನೋ ಅಶ್ಲೀಲವಾಗಿ ನುಡಿದೆಯಂತೆ! ಅದಕ್ಕಾಗಿ ರಾಮಯ್ಯನೇ ಎರಡೇರಿಸುವುದಂತೆ ನಿನಗೆ! ...ರಾಘವರಾಯರು ಇದರ ವ್ಯವಸ್ಥಾಪಕರು." ಶೀನಣ್ಣ ನಂಬಿಯೂ ನಂಬದಾದ ಅವನ ತಲೆ ತಿರುಗಿದಂತಾಯಿತು.

"ಅಯ್ಯೋ–ಅವಳೇ ಆ ರಾಮಯ್ಯನೇ ನೀನೆಲ್ಲಿ ಕೇಳಿದೆ ಗೋಪಾಲ?" ಶೀನಣ್ಣ ನಿಟ್ಟುಸಿರುಗರೆದು ಕೇಳಿದ.

"ನೀನಿತ್ತ ಬಂದೊಡನೆ ರಾಘವರಾಯರು ರಾಮಯ್ಯನಿಗೆ "ಲೆಕ್ಚರು" ಹೊಡೆದರಂತೆ ಗುಟ್ಟಿನಿಂದ. ಅದು ಆ ಕಿಸುಬಾಯಿ ರಾಮಯ್ಯನಲ್ಲಿ ಗುಟ್ಟಾಗಿ ನಿಲ್ಲುವುದೇ? ನನ್ನೊಡನೆ ಮೆಲ್ಲ ಹೇಳಿದ." ಗೋಪಾಲ ವಿವರಿಸಿದ. "ನೀನು ನಾಳೆ ಬೆಳಗಾಗುತ್ತಲೇ ಪುತ್ತೂರಿಗೆ ಹೋಗಿಬಿಡು. ಮಾವನಲ್ಲಿಗೆ ಹೋಗಬೇಕೆನ್ನುತ್ತಿದ್ದ ಎಂದು ಬಿಡುತ್ತೇನೆ." ಉಪಾಯವನ್ನೂ ಆತನೇ ಸೂಚಿಸಿದ.

ಶೀನಣ್ಣನ ತಲೆಯಲ್ಲಿ ಯೋಚನೆಗಳೇ ಯೋಚನೆಗಳು. 'ಆ ಊರಲ್ಲಿರುವ

ಸೌಭಾಗ್ಯವೇನು?' 'ವಾಯಿದೆ ಗೇಣಿಗೆ ಕೊಟ್ಟು ಬಂದುಬಿಡು!' ಮಾವನ ಮಾತು ಮತ್ತೆ—ಇಲ್ಲ. ಯಾವುದೂ ಇಲ್ಲ 'ಅಯ್ಯೋ ಹೇಡಿಯಂತೆ!' 'ಇದು ಹೇಡಿತನವಲ್ಲ.'

ಸ್ವಲ್ಪ ಹೊತ್ತಿನ ಮೌನದ ನಂತರ ಶೀನಣ್ಣನ ಮುಖಮುದ್ರೆಯಲ್ಲೇನೋ ನಿರ್ಧಾರಮೂಡಿತು.

"ಈ ಊರೇ ಬೇಡವಾಗಿದೆ ಗೋಪಾಲ" ಶೀನಣ್ಣನೆಂದ ಬೇಸರದ ದನಿಯಿಂದ.

"ಮತ್ಸರದ ಮುದ್ದೆಗಳು. ಇವುಗಳಿಗೆಲ್ಲ ಒಂದೊಂದು ಕೋಟಿ ಖರ್ಚು ಮಾಡಿಯೇ ಬಿಡುತ್ತೇನೆ." ಗೋಪಾಲನೆಂದ ಕೋಪದಿಂದ. "ಹಾಳಾಗಲಿ ಈ ದುಡ್ಡಿಗೆ" ಕೊಂಚಕಾಲ ಮೌನತಾಳಿ ಗೋಪಾಲನೇ ಶೀನಣ್ಣನನ್ನೆಚ್ಚರಿಸಿದ. ಈರ್ವರೂ ಮತ್ತೆ ಮೌನದಲ್ಲಿಯೇ ಶೀನಣ್ಣನ ಮನೆಯಂಗಳಕ್ಕೆ ಬಂದು ತಲಪಿದರು. "ನಾಡದು ಕಾಣುವೆ ಶೀನಣ್ಣ" ಗೋಪಾಲ ಮುಂದುವರಿದ. ಶೀನಣ್ಣ ಬಾಗಿಲು ತಟ್ಟಿ ಮನೆಯೊಳಕ್ಕೆ ನಡೆದ.

ಂ ಂ ಂ ಂ ಂ ಂ

ಪೇಟೆಯಲ್ಲಿ ಮರುದಿನ ದೊಣ್ಣೆಹಿಡಿದ ಮೂರು ನಾಲ್ಕು ಜನ ಕಟ್ಟೆಯಿದಿರಲ್ಲಿ ಸಾಯಂಕಾಲವಿಡೀ ತಿರುಗಾಡುತ್ತಿದ್ದರು. ಎಂದಿನಂತೆ ಬಂದ ರಾಘವರಾಯರು ಮೊದಲು ಬಹಳ ಸಂತಸದಿಂದ ಗೆಲವು ಮುಖದಿಂದ ಕಂಡರೂ ಮತ್ತೇನೋ ಅಲ್ಲಿ-ಇಲ್ಲಿ ಪಿಸುಗುಟ್ಟಿ ಮಾಯವಾಗಿದ್ದರು.

ಂ ಂ ಂ ಂ ಂ ಂ

ಮೂರು ದಿನಗಳ ಳಿಚಕ—ಬೆಂಕಿಗದ್ದೆ ಭೀಮೇಶ್ವರ ಭಟ್ಟರೊಂದಿಗೆ ಶೀನಣ್ಣ ಹಲವರ ದರ್ಶನ ಮಾಡಿದ್ದ. ಅವನ ಮುಖದಲ್ಲಿ ಗೆಲವಿತ್ತು. ಎದೆಯಲ್ಲಿ ನೋವಿತ್ತು. ಹಲವರ ಋಣ ತೀರಿಸಿದ ತೃಪ್ತಿಯಿತ್ತು. ಯಾರೊಡನೆಯೂ ಮಾತು ಬೆಳೆಸದೆ ಕಾರ್ಯ ಸಾಧಿಸಿಯೇ ಬಿಟ್ಟ.

ಪೇಟೆಯ ನಾಲ್ಕಂಗಡಿಗಳಲ್ಲಿಯೂ ಒಂದೇ ಮಾತು. 'ಶೀನಣ್ಣ ಆಸ್ತಿಯನ್ನು ವಾಯಿದೆ ಗೇಣಿಗೆ ಕೊಟ್ಟಾಯಿತಂತೆ!' ಎಂದು. ರಾಘವರಾಯರು

ವೊದಲು ಕೇಳಿದಾಗ ಹಲ್ಲು ಕಡಿದು ಕಲ್ಲು ಕಚ್ಚಿ ನಕ್ಕು ಹೋಗಿದ್ದರು. ಮತ್ತೆ ಪುನಃ ಬಂದು 'ಯಾವಾಗ ಹೋಗುತ್ತಾನಂತೆ' ಎಂದು ವಿಚಾರಿಸಿದ್ದರು. ಕಡವೆಕಲ್ಲರ ಪ್ರತಿಕ್ರಿಯೆಯೇನೂ ವ್ಯಕ್ತವಾಗಿರಲಿಲ್ಲ. ಆದರೆ ಬಾಯಿಗೆ ಬಂದ ಹಣ್ಣನ್ನು ಕಾಗೆ ಕಚ್ಚುವುದೆಂದು ಅವರೆಣಿಸಿರಲಿಲ್ಲ.

೦ ೦ ೦ ೦ ೦ ೦

ಊಟ ಮುಗಿಸಿ ವರ್ತಮಾನ ಪತ್ರಿಕೆಯೋದುತ್ತಾ ಕುಳಿತಿದ್ದರು ಕಡವೆ ಕಲ್ಲರು. ಆಳುಮಗ ಚೋಮ ಕಾಗದವೊಂದನ್ನು ತಂದಿತ್ತು ‟ಶೀನಣ್ಣ ಕೊಟ್ಟರು— ಕಟ್ಟೆಯಲ್ಲಿ ಕುಳಿತಿದ್ದರು. ಗಾಡಿಯೂ ಒಂದು ನಿಂತಿತು" ಎಂದ. ದೂರದಲ್ಲಿ ಕುಳಿತಿದ್ದ ಶಾರದಮ್ಮ ‟ಸರಸಮ್ಮ ಇದ್ದಳೇ? ಪಾಪ! ಆಗ ಬಂದು ಎಳೆಮಕ್ಕಳಂತೆ ಕೂಗಿಬಿಟ್ಟಳು. ಅಯ್ಯೋ ಎನಿಸುತ್ತಿದೆ." ಎಂದು ನಿಟ್ಟುಸಿರುಬಿಟ್ಟಳು.

ಕಾಗದ ಬಿಚ್ಚಿ ಗಟ್ಟಿಯಾಗಿ ಓದಿದರು ಕಡವೆಕಲ್ಲರು

ಅಣ್ಣಾ,

ಅನಂತ ಅಪರಾಧಗಳ ಕೊನೆಯಲ್ಲೂ ಪ್ರೇಮದ ಬೀಜ ಅಳಿಯಲಾರದು. ಆಗದು, ನಿಮ್ಮ ಕೈಯಿಂದಲೇ ಬೆಳೆದುನಿಂತ ಮರವು ಸುಟ್ಟು ಬೂದಿಯಾದಾಗ ನಿಮ್ಮ ಹೃದಯವೂ ದುಃಖದಿಂದ ಸವೆಯದಿರಲಾರದು. ಪರಿಶುದ್ಧರಾದ ನನ್ನ ತಾಯಿಯಂತಿದ್ದ ಶಾರದಮ್ಮನವರಲ್ಲಿಯೂ ದ್ವೇಷವನ್ನುಂಟು ಮಾಡಿದ ನನ್ನ ಪ್ರತಿಕೂಲವಿಧಿಯು ಬಲವಂತವಾದುದು. ನನ್ನ ಹೃದಯವು ನನಗರಿತಿದೆ. ಪರಮಾತ್ಮನಿಗರಿತಿದೆ. ಈ ಮರೆಯಲಾರದ ಹೃದಯವು ಪರಿತಪಿಸುತ್ತಿದ್ದರೂ ನೀವದನ್ನು ಮರೆತುಬಿಡಿ.

ಎಲ್ಲರಿಗೂ ವಂದನೆಗಳು. ಮರೆತುಬಿಡಿ.

ಇತಿ ನಿಮ್ಮ ಸೋದರನಂತಿದ್ದ

'ಶೀನಣ್ಣ'

ಕಡವೆಕಲ್ಲರ ಕಣ್ಣಲ್ಲಿಯೂ ಒಂದು ತೊಟ್ಟು ನೀರಿಳಿಯಿತು. ಆ ವಿಷಾಸೆಯ ತುದಿಯನ್ನೊಮ್ಮೆ ಕಚ್ಚಿ ಸುಮ್ಮನಾದರು. ಶಾರದಮ್ಮ ತುಂಬಿದ

ಕಣ್ಣಿಂದ ಹೊರಹೋದಳು. ಮರೆಯಲ್ಲಿ ನಿಂತು ಕೇಳುತ್ತಿದ್ದ ಗಂಗಮ್ಮನನ್ನು ಕೇಳುವವರೇ ಇಲ್ಲ.

ಮೇ ತಿಂಗಳ ಹನಿ ಹನಿ ಮಳೆ ಉದುರುತ್ತಿತ್ತು. ಚಂದ್ರನ ಬೆಳದಿಂಗಳು ಅಲ್ಲಲ್ಲಿ ಹರಡಿತ್ತು. ಕತ್ತಲೆಯ ಪ್ರಶಾಂತ ವಾತಾವರಣ! ನಿಶ್ಶಬ್ದ ನೀರವತೆ ಯೆದೆಯಲ್ಲಿ ಆ ಗಾಡಿಯು ಗಡಗಡ! ಕಾಡಿನ ಮಧ್ಯದ ಮಾರ್ಗದಲ್ಲಿ ಗಾಡಿ ಸಾಗುತ್ತಲಿತ್ತು. ಗುಯ್‌ಗುಯೆನ್ನುವ ರಾತ್ರಿ! ಸಾಮಾನಿನ ಮೇಲಿಂದ ಮಕ್ಕಳನ್ನು ನಿದ್ರಿಸುತ್ತಾ ಗಾಡಿಯೊಳಗೆ ಕುಳಿತ ಸರಸುವಿನ ಹೃದಯದ ನೋವು ಕಣ್ಣಲ್ಲಿಳಿದು ಬರುತ್ತಿತ್ತು. ಗಾಡಿಯುವನ 'ಓ ಓ ..................." ಗಳಿಗೆಗೊಮ್ಮೆ ಕೇಳುತ್ತಿತ್ತು. 'ಕೊನೆಗೂ ಸಂತಸದ ಸಮಾಧಾನದ ಮಾತ ನ್ನೆತ್ತಲಿಲ್ಲ ಶಾರದಮ್ಮ—ಹೆರಿಯಮ್ಮ! ಹೊರಟು ನಿಂತಾಗ, ಮೊಗದಿರುಹಿ ಒಳಗೆ ನಡೆದೇ ಬಿಟ್ಟಿದ್ದರು" ಸರಸು ಮನದಲ್ಲೇ ನೋಯುತ್ತಿದ್ದಳು. ಸರಸು ವಿನ ನಿಟ್ಟುಸಿರು ಗಾಳಿಯಲ್ಲಿ ತೇಲಿ ಅನಂತದಲ್ಲಿ ಲೀನವಾಗುತ್ತಿತು. ಹಿಂದಿ ನಿಂದ ಶೀನಣ್ಣ ಅಪರಾಧಿಯಂತೆ ಕಾಲ್ನಡಿಗೆಯಿಂದಲೇ ಬರುತ್ತಿದ್ದ. ಭಾರ ವಾದ ಹೃದಯವನ್ನೆತ್ತಿ ತಗ್ಗಿತ್ತು ಆತನ ತಲೆ.

"ಬೇಡವಾಗಿದೆ ಊರು"—ಗೋಪಾಲ ಮುಂತಾದ ಗೆಳೆಯರ ಬಳಗ ಬೀಳ್ಕೊಡಲು ಕಟ್ಟೆಯಲ್ಲಿ ನೆರೆದಾಗ "ಬೇಡವಾದ ಊರಿನಿಂದ ಹೋಗು ತ್ತೀಯಾ ಶೀನಣ್ಣ! ಮರೆಯದಿರು" ಎಂದಿದ್ದರು. 'ಅಯ್ಯೋ ಗೋಪಾಲ-. ಗೋಪಾಲ.' ನೆನೆನೆನೆದ ಶೀನಣ್ಣ. ಬೇಡವಾದ ಊರು ದಾಟುತ್ತಲಿತ್ತು. 'ಆ ಊರಲ್ಲಿರುವ ಸೌಭಾಗ್ಯವೇನು ಶೀನಣ್ಣ' ತಲೆಯಲ್ಲಿ ಅದು ಮತ್ತೂ ಸುಳಿಯುತ್ತಿತ್ತು. ಕಣ್ಣಿನಿಂದ ಹರಿಯುವ ಕಣ್ಣೀರಿನಿಂದ ಮಾರ್ಗವನ್ನು ತೊಯ್ಯುತ್ತಾ ಸಾಗಿದ್ದ ಶೀನಣ್ಣ. ಗಡಗಡ ಗಾಡಿ ಹೋಗುತ್ತಿತ್ತು. ಶೀನಣ್ಣ ನೆದೆಯಲ್ಲಾಗುತ್ತಿತ್ತು ಹೇಳಲಾರದ ಛಡಪಡ.

ಅತ್ತಿತ್ತ ನೋಡಿದ ಶೀನಣ್ಣ! ಬಯಲಮನೆಯ ಬಳಿ ಬಂದಾಗಿತ್ತು. ಯಾರದೋ ನಗೆ ಕೇಳಿಬರುತ್ತಿತ್ತು. ಶೀನಣ್ಣ ಸಹಜವಾಗಿಯೇ ಅತ್ತ ನೋಡಿದ. ರಾಘವರಾಯರು ನಗುತ್ತ ಹೊರಬರುತ್ತಿದ್ದರು. ದೀಪ ಹಿಡಿದು ದಾರಿ ತೋರಿಸುವವಳಂತೆ ಗೋಪಮ್ಮನೂ ಜಗಲಿಯ ಕೊನೆವರೆಗೂ ಬಂದು ಕಿಲಕಿಲನೆ ನಕ್ಕಳು. ರಾಘವರಾಯರು ಮತ್ತೆ ಮತ್ತೆ ತಿರುಗಿ ನೋಡುತ್ತ

ದೊಣ್ಣೆ ಬೀಸಲಾರಂಭಿಸಿದರು. ಶೀನಣ್ಣನ ಬಗೆಯುಲ್ಲಾದ ವೇದನೆಗೆ ಮಿತಿಯಿಲ್ಲ. ಅವಳು ಆಗೋಪಮ್ಮ-ಆ ಷಂಡರಾಮಯ್ಯ; ಅಯ್ಯೋ ತನ್ನ ಮೋಹದ ಬಲೆಯಲ್ಲಿ ಬೀಳದ ತನ್ನನ್ನು ಹೊಡೆಯಲೆಳಸಿದಳು ಈಗ ರಾಘವರಾಯರು... ಈ ರಾತ್ರಿ–ಆ ರಾಮಯ್ಯ ನೆತ್ತ...... ಆ ದುಃಖದಲ್ಲಿಯೂ ತಿರಸ್ಕಾರದ ನಗು ಮೂಡಿತು ಶೀನಣ್ಣನಲ್ಲಿ.

ಕಂಡಿತು ರಾಘವರಾಯರ ದೊಣ್ಣೆ. ಮಾರ್ಗಕ್ಕಿಳಿದು ''ಯಾರದಿದು ಗಾಡಿ" ಎಂದು ಮೂಗಿಗೇರಿಸಿದ ಕನ್ನಡಕದೊಳಗಿಂದ ನೋಡಿ ಕೇಳಿದರು. ಹಿಂದಿನಿಂದ ಹೋಗುತ್ತಿರುವ ಶೀನಣ್ಣನ ಮುಖಕ್ಕೊಮ್ಮೆ ಲೈಟುಬಿತ್ತು. ''ಓಹೋ ಶೀನಣ್ಣ!" ರಾಘವರಾಯರು ಹುಸಿನಗೆ ನಕ್ಕರು. ಶೀನಣ್ಣ ಮಾತೆತ್ತಲಿಲ್ಲ. ''ನಮ್ಮೂರು ಬಿಡುತ್ತಿರುವೆ. ನಮ್ಮನ್ನೂ ಮರೆಯಬೇಡ." ರಾಘವರಾಯರೆಂದರು.

"ಮರೆಯುವುದೆಂತು?" ಶೀನಣ್ಣ ಯಥಾರ್ಥವಾಗಿಯೇ ನುಡಿದ. ಗಾಡಿ ಸಾಗುತ್ತಿತ್ತು. ಶೀನಣ್ಣನೂ ಸಾಗಿದ. ರಾಘವರಾಯರು ಕೊಂಚ ಹೊತ್ತು ನಿಂತು ''ಹುಂ" ಎಂದು ತುಟಿ ಕಚ್ಚಿ ದೊಣ್ಣೆ ಬೀಸಿದರು. ಶೀನಣ್ಣನ ಎದೆ ಉರಿಯುತ್ತಿತ್ತು. ಗಾಡಿ ಸಾಗುತ್ತಿತ್ತು 'ಗಡ ಗಡ' ಎಂದು.

ಇದ್ದಕ್ಕಿದ್ದಂತೆಯೇ ಕಡವೆಕಲ್ಲರ ಮನೆಯಲ್ಲಿ ಬೊಬ್ಬೆಯೆದ್ದಿತು. 'ಬೆಂಕಿ ಬೆಂಕಿ! ಮನೆಯ ಬಳಿಯ ಕೊಟ್ಟಿಗೆಗೆ ಬೆಂಕಿಹಿಡಿದಿತ್ತು. ಐನೂರು ಮುಡಿ ಭತ್ತದ ಉಗ್ರಾಣಕ್ಕೇನೇ ಬೆಂಕಿ ನುಸುಳಿತ್ತು. ಎಲ್ಲರೂ ಹೊರ ಬಂದಾಗ ತೋಟದೊಳಗಿಂದ ಯಾರೋ ಓಡಿದಂತಾಯ್ತು. ಹಿಂದೋಡುವ ಪ್ರಯತ್ನ ಯಾರೂ ಮಾಡಲಿಲ್ಲ. ಬೊಬ್ಬೆಯಾಯ್ತು. ಆಳುಗಳು ಬಂದು ಶತಯತ್ನ ಮಾಡಿ ಮನೆಗೆ ಬಾರದಂತೆ ನೋಡಿಕೊಂಡರು. ಕೊಟ್ಟಿಗೆಯಿಡೀ ಅಗ್ನಿಗಾಹುತಿಯಾಯಿತು. ಕಡವೆಕಲ್ಲರು ಸುಡುತ್ತಿರುವ ಕೆಂಡದಂತಾಗಿದ್ದರು. ಅವರ ತಂದೆಯ ಮುಖ ಕೆಂಪಗಾಗಿತ್ತು. ಶಾರದಮ್ಮ ನಿಟ್ಟುಸಿರು ಬಿಡುತ್ತಾ ನಿಂತಿದ್ದರು. ಮನೆಗೆ ಮನೆಯೇ ಬೆಂಕಿಯ ತಾಪವನ್ನನುಭವಿಸುತ್ತಿತ್ತು. "ನಿಮ್ಮ ಕೈಯಿಂದಲೇ ನಟ್ಟು ಬೆಳೆಯಿಸಿದ ಮರವೊಂದು ಸುಟ್ಟು ಬೂದಿಯಾದಾಗ ನೀವೆಷ್ಟು ಮನನೋಯಲಾರಿರಿ?" ಶೀನಣ್ಣನ ಮಾತು! ಕಡವೆಕಲ್ಲರು ಅಪ್ರತಿಭರಾದರು.

ಗಾಡಿಯು ಹಿಂದಿನಿಂದ—ಶೀನಣ್ಣನ ಎದೆಯುರಿಯುತ್ತಲೇ ಇತ್ತು.

ಮಾರ್ಗದಲ್ಲಿ ರಾಘವರಾಯರು ದೊಣ್ಣೆ ಬೀಸುತ್ತ ನಡೆದಿದ್ದರು. ಯಾರೋ ಇಬ್ಬರ ಭೇಟಿಯಾಯ್ತು. ಮಾತಾಯ್ತು. ಗೆದ್ದೆನೆಂಬಂತೆ ತಲೆ ತೂಗಿ ರಾಘವರಾಯರು ಮುಂದುವರಿದರು. ಬಯಲ ಮನೆಯ ಬಾಗಿಲು ತೆರೆಯಿತು. ಯಾರೋ ಒಳಕ್ಕೆ ಹೋದರು.

'ಗಡಗಡ' ಗಾಡಿಸಾಗಿತ್ತು. ಶೀನಣ್ಣ ಎದೆಯುರಿಯುತ್ತಲೇ ಇತ್ತು. 'ಗಾಡಿಯಲ್ಲಿ ಕುಳಿತುಕೊಳ್ಳಬಾರದೆ' ಸರಸು ಕರೆದಳು ಗಾಡಿಯೊಳಗಿಂದ. ಸದ್ದಿಲ್ಲದೇರಿ ಕುಳಿತ ಶೀನಣ್ಣ.

ಅವನ ಎದೆ ಉರಿಯುತ್ತಲೇ ಇತ್ತು.

o o o o o o

ಊರಲ್ಲಿ ಬೆಂಕಿಯ ಸುದ್ದಿ ಗಾಳಿಯಲ್ಲಿ ಹಬ್ಬಿತು. ಏನೇನೋ ಪಿಸು ಪಿಸು ಮಾತು ನಡೆಯುತ್ತಿತ್ತು. ರಾಘವರಾಯರು ಮತ್ತು ಕಡವೆಕಲ್ಲರ ಜೋಡಿ ಎರಡು ದಿನಕ್ಕೊಮ್ಮೆ ಪುತ್ತೂರಿಗೆ ಧಾವಿಸುತ್ತಿತ್ತು. ಊರಿನ ಕಟ್ಟೆ ಬೆಂಕಿಯ ಪ್ರಕರಣದ ಸುದ್ದಿಯ ಬೀಡಾಗಿತ್ತು. ಹಲವಾರು ಕಕ್ಷಿ ಸಾಕ್ಷಿಗಳ ಓಡಾಟ–ಪೋಲೀಸರ ಆಗಮನ ನಡೆದಿತ್ತು.

o o o o o o

ಒಂದು ತಿಂಗಳ ಬಳಿಕ—

ಮೊಕದ್ದಮೆಯ ತೀರ್ಮಾನವನ್ನು ಕಾಯುತ್ತ ಕುಳಿತಿದ್ದರು ಕಡವೆ ಕಲ್ಲರು.

ಅದೇ ಅವರ ಸ್ಥಳದಲ್ಲಿ ಕಡವೆಕಲ್ಲರು ವರ್ತಮಾನ ಪತ್ರಿಕೆಯೋದಲು ಕನ್ನಡಕವನ್ನು ಮೂಗಿಗೇರಿಸಿದ್ದರು. ಶಾರದಮ್ಮನೂ ಯಥಾಸ್ಥಾನದಲ್ಲಿ ಕುಳಿತಿದ್ದರು. ಕಡವೆಕಲ್ಲರ ಕಣ್ಣಿಗೆ ಬಿದ್ದ ಮೊದಲ ವಾರ್ತೆ "ಪಟೇಲ ಕಡವೆ ಕಲ್ಲರ ಮನೆ ಸುಟ್ಟ ದಾವೆಯಲ್ಲಿ ಆಪಾದನೆಯು ಶೀನಣ್ಣನವರ ಮೇಲೆ ಸ್ಥಿರ ವಾಗಿ ಒಂದು ವರ್ಷ ಕಠಿಣ ಸಜೆಯನ್ನು ಅವರಿಗೆ ವಿಧಿಸಲಾಯ್ತು" ಎಂದು. ಕಡವೆಕಲ್ಲರು ಗಟ್ಟಿಯಾಗಿಯೇ ಓದಿದ್ದರು. ಅವರ ಕಣ್ಣಲ್ಲಿ ನೀರು ಬಂದಿತು. ತುಟಿ ಮಾತ್ರ ಕಚ್ಚಿಕೊಂಡಿತು. ಶಾರದಮ್ಮ ಮಾತ್ರ ಗಟ್ಟಿಯಾಗಿ ಕೂಗಿ

ಕೊಂಡರು. "ಪುಟ್ಟು—ಶೀನಣ್ಣ ಖಂಡಿತ— ಜೈಲಿಗೆ—ಹೋಗಲಾರ! ಸಾಧ್ಯವಿಲ್ಲ!"

ರಾಘವರಾಯರು "ಹ್ಞ! ಹೇಗಿದೆ ವರ್ತಮಾನ" ಎನ್ನುತ್ತಾ ಆಕಸ್ಮಾತ್ ಕಡವೆಕಲ್ಲರ ಜಗುಲಿಯ ಮೇಲೇರುತ್ತಿದ್ದರು.

"ಅನ್ಯಾಯ! ಸಾಧ್ಯವಿಲ್ಲ! ನಾನು ಜೀವವಿರುವರ ವರೆಗೆ ಶೀನಣ್ಣ ಜೈಲಿಗೆ ಹೋಗಲು ಸಾಧ್ಯವಿಲ್ಲ. ಅವನು ಜೈಲಿಗೆ ಹೋದರೆ ನಾನಿಲ್ಲಿ ಉಳಿಯಲಾರೆ........ಖಂಡಿತ....... ನಿಶ್ಚಯ." ಶಾರದಮ್ಮ ಏಳಲೆಳಿಸಿದಳು. ಶಾರದಮ್ಮನ ನಿರ್ಧಾರದ ಮಾತು ಮನೆಯಲ್ಲೆಲ್ಲ ಗುಯ್‌ಗುಟ್ಟಿತು. ಕಲ್ಲಿನ ಗೊಂಬೆಯಂತಿದ್ದ ಕಡವೆಕಲ್ಲರು 'ಆಯ್ಯೋ' ಎಂದು ಚೀರಿದರು. ರಾಘವರಾಯರ ಎದೆಗೆ ಚೂರಿಯಿರಿದಂತಾಯ್ತು.

ಕಡವೆಕಲ್ಲರ ಕಣ್ಣಲ್ಲಿ ಒಂದು–ಎರಡು–ಕಣ್ಣೀರಿನ ಬಿಂದು—ಧಾರೆ ಹರಿಯತೊಡಗಿತು. ತಟ್ಟನೆ ಹಾರಿ ತನ್ನ ಅಂಗಿಯನ್ನೆತ್ತಿಕೊಂಡು ಆ ಕತ್ತಲಲ್ಲೇ ಹೊರಬಿದ್ದರು. ಶಾರದಮ್ಮ ನೋಡುತ್ತಲೇ ಕುಳಿತಿದ್ದಳು.

ರಾಘವರಾಯರುರು ನಿಂತೇ ಇದ್ದರು.



Printed at Jaya Bharth Press Mangalore—1.

